# ಮಹಾರಾಣಿ

# ಲಕ್ಷ್ಮಮ್ಮಣ್ಣಿ

ಲೇಖಕರು :

ವಿದ್ಯಾವಿಭೂಷಣ

ಪಿ. ಎಸ್. ಲಿಂಗಣ್ಣ

ಪ್ರಕಾಶಕರು :

ಓಂ ನಮಃಶಿವಾಯ ಪಬ್ಲಿಕೇಷನ್
ನಂ. 202, 5ನೇ ಮೈನ್ ರೋಡ್, ಚಾಮರಾಜಪೇಟೆ,
ಬೆಂಗಳೂರು–18

ಮಹಾರಾಣಿ

# ಲಕ್ಷ್ಮಮ್ಮಣ್ಣಿ

ಲೇಖಕರು :

ವಿದ್ಯಾವಿಭೂಷಣ

ಓ. ಎಲ್. ಲಿಂಗಣ್ಣಯ್ಯ, ಬಿ.ಎ.,

ಪ್ರಕಾಶಕರು :

ಓಂ ನಮಃಶಿವಾಯ ಪಬ್ಲಿಕೇಷನ್

ನಂ. 202, 5ನೇ ಮೈನ್ ರೋಡ್, ಚಾಮರಾಜಪೇಟೆ,

ಬೆಂಗಳೂರು-18

# ಅಧ್ಯಾಯ ೧

## ಇತಿಹಾಸ ಪರಿಚಯ

ಮೈಸೂರು ನಾಡು ಅತ್ಯಂತ ಪ್ರಾಚೀನವಾದುದು. ರಾಮಾಯಣದ ಕಾಲದಲ್ಲಿಯೂ, ಮಹಾಭಾರತದ ಕಾಲದಲ್ಲಿಯೂ ಈ ನಾಡು ಪ್ರಸಿದ್ಧವಾಗಿತ್ತು. ಇದು ಬಹು ಸುಂದರವಾದ ನಾಡು. ಸಮುದ್ರ ಮಟ್ಟದಿಂದ ೩,೦೦೦ ಅಡಿಗಳಷ್ಟು ಎತ್ತರವಾಗಿದೆ. ಈ ನಾಡಿನ ಪಶ್ಚಿಮಭಾಗದಲ್ಲಿ ದಟ್ಟವಾದ ಕಾಡುಗಳಿವೆ; ಉನ್ನತೋನ್ನತವಾದ ಬೆಟ್ಟದ ಸಾಲುಗಳಿವೆ. ಅಚ್ಚ ಹಸುರಿನ ಹುಲ್ಲುಬಯಲುಗಳಿವೆ; ವಿಶಾಲವಾದ ಕೆರೆಗಳಿವೆ. ಕಾವೇರೀ, ಕಪಿಲಾ, ಹೇಮಾವತೀ, ಲೋಕಪಾಲನೆ, ತುಂಗಭದ್ರಾ, ವೇದಾವತೀ, ಶರಾವತೀ, ಉತ್ತರ ಪಿನಾಕಿನೀ, ಕ್ಷೀರನದಿ, ಜಯಮಂಗಳಾ ಮುಂತಾದ ಪುಣ್ಯನದಿಗಳು ಈ ನಾಡಿನಲ್ಲಿ ಹರಿಯುತ್ತಿವೆ. ಪೈರುಪಚ್ಚೆಗಳಿಂದಲೂ ವಿಸ್ತಾರವಾದ ಗದ್ದೆ ಬಯಲುಗಳಿಂದಲೂ ಅನೇಕ ವಿಧವಾದ ಫಲವೃಕ್ಷಗಳಿಂದಲೂ ಕೂಡಿರುವ ಈ ನಾಡಿನ ಚೆಲುವು ಮನಮೋಹಕವಾಗಿದೆ. ಸುಂದರವಾದ ಬಣ್ಣ ಬಣ್ಣದ ಪಕ್ಷಿಗಳು ಇಂಚರದಿಂದ ಹಾಡುವುವು; ಕೋಮಲ ಲತೆಗಳಲ್ಲಿ ಅರಳಿರುವ ಹೂಗಳು ಪರಿಮಳವನ್ನು ಬೀರುವುವು. ಒಂದೊಂದು ಋತು ಧರ್ಮವೂ ಮನಸ್ಸಿಗೆ ಉಲ್ಲಾಸವನ್ನುಂಟುಮಾಡುವುದು.

ಈ ನಾಡಿನ ನೈಋತ್ಯ ಭಾಗದಲ್ಲಿಯೂ ಪಡವಲು ಭಾಗದಲ್ಲಿಯೂ ದೊಡ್ಡದೊಡ್ಡ ಕಾಡುಗಳಿವೆ. ಈ ಕಾಡುಗಳಲ್ಲಿ ಆನೆ, ಹುಲಿ, ಕಾಡೆಮ್ಮೆ, ಕಾಡುಕೋಣ, ಕರಡಿ, ಕಡವೆ, ಸಾರಗ, ತೋಳ, ನರಿ ಮತ್ತು ಕುಂದಿಲಿ ಮೊದಲಾದ ಕಾಡುಪ್ರಾಣಿಗಳು ಸ್ವೇಚ್ಛೆಯಾಗಿ ಸಂಚರಿಸುತ್ತಿರುವುವು. ಈ ದೇಶದ ಬಡಗಲು ಭಾಗದಲ್ಲಿಯೂ ಮೂಡಲು ಭಾಗದಲ್ಲಿಯೂ ಇರುವ ಕುರುಚಲು ಗಿಡಗಳ ಪ್ರದೇಶಗಳಲ್ಲಿ ಜಿಂಕೆಗಳು ಹಿಂಡುಹಿಂಡಾಗಿ ಓಡಾಡುತ್ತಿರುವುವು.

ಈ ನಾಡಿನಲ್ಲಿ ಚಾಮುಂಡೀ ಬೆಟ್ಟ, ಚಂದ್ರದ್ರೋಣ ಪರ್ವತ, ಕಾಮನ ದುರ್ಗ, ಚಿತ್ರದುರ್ಗ, ಪಾವುಗಡ, ಮಧುಗಿರಿ, ನಂದಿದುರ್ಗ, ದೇವರಾಯನ ದುರ್ಗ, ಶಿವಗಂಗೆ, ಸಾವನದುರ್ಗ, ಬಿಳಿಗಿರಿರಂಗನ ಬೆಟ್ಟ, ಹಿಮವದ್ಗೋಪಾಲ ಸ್ವಾಮಿ ಬೆಟ್ಟ, ಕುದುರೆಮುಖ, ಬಲ್ಲಾಳರಾಯನ ದುರ್ಗ ಮುಂತಾದ ಬೆಟ್ಟಗಳಿವೆ. ಅನೇಕ ಬೆಟ್ಟಗಳ ಮೇಲೆ ಬಲವಾದ ಕೋಟೆ ಕೊತ್ತಲುಗಳಿವೆ; ಅಚ್ಚಳಿಯದೆ ನಿಂತಿರುವ ದೇವಾಲಯಗಳಿವೆ. ಇವು ನಮ್ಮ ಹಿರಿಯರ ಶೌರ್ಯ ಪ್ರತಾಪಗಳನ್ನು ನೆನಪಿಗೆ ತರುತ್ತಿವೆ. ಈ ನಾಡಿನ ನಾನಾ ಪ್ರದೇಶಗಳಲ್ಲಿರುವ ದೇವಾಲಯಗಳ ಶಿಲ್ಪಕಲೆಯ ಸೌಂದರ್ಯ ನೋಟಕರ ಕಣ್ಮನಗಳನ್ನು ತಣಿಸುತ್ತಿದೆ. ಶ್ರವಣಬೆಳಗೊಳದ ಬೆಟ್ಟದ ಮೇಲೆ ಒಂದೇ ಕಲ್ಲಿನಲ್ಲಿ ಕೆತ್ತಿರುವ ಸುಮಾರು ಐವತ್ತೇಳು ಅಡಿಗಳ ಎತ್ತರವಿರುವ ಗೋಮಟೇಶ್ವರ ವಿಗ್ರಹವು ನಮ್ಮ ಜನರ ಸಂಸ್ಕೃತಿಯ ವೈಭವವನ್ನು ತೋರಿಸುವ ಒಂದು ಹೆಗ್ಗುರುತಾಗಿದೆ.

ಈ ನಾಡಿನಲ್ಲಿ ನಂಜನಗೂಡು, ಬ್ರಹ್ಮಾಶ್ವತ್ಥ, ಮುಡುಕುತೊರೆ, ತಲಕಾಡು, ಮೇಲುಕೋಟೆ, ಸುಬ್ರಹ್ಮಣ್ಯ, ದತ್ತಾತ್ರೇಯ ಪೀಠ, ಶ್ರವಣ ಬೆಳಗೊಳ, ಹೊಂಬುಚ, ಹರಹರ, ನಿಟ್ಟೂರು, ಗುಬ್ಬಿ, ಸಿದ್ದಗಂಗೆ, ವಿದುರಾಶ್ವತ್ಥ, ಆವನಿ, ನಂದಿ ಮತ್ತು ಚುಂಚನಗಿರಿ ಇವೇ ಮೊದಲಾದ ಪುಣ್ಯಕ್ಷೇತ್ರಗಳಿವೆ. ಹಿಂದೆ ಅನೇಕ ಮಹರ್ಷಿಗಳೂ, ಪುಣ್ಯಾತ್ಮರೂ ಸಂಚರಿಸಿ ಈ ನಾಡನ್ನು ಪಾವನಗೊಳಿಸಿರುತ್ತಾರೆ. ಅಗಸ್ತ್ಯ, ವಸಿಷ್ಠ, ವಿಶ್ವಾಮಿತ್ರ, ವಾಲ್ಮೀಕಿ, ಋಷಿಶೃಂಗ, ಜಮದಗ್ನಿ, ಕಣ್ವ, ಮಾರ್ಕಂಡೇಯ, ಗೌತಮ ಮುಂತಾದ ಋಷಿವರ್ಯರು ಈ ದೇಶದ ಬೇರೆ ಬೇರೆ ಭಾಗಗಳಲ್ಲಿ ಆಶ್ರಮಗಳನ್ನು ಕಟ್ಟಿ ಕೊಂಡು ತಪಸ್ಸು ಮಾಡುತ್ತಿದ್ದರೆಂದು ತಿಳಿದು ಬರುತ್ತದೆ. ಸತ್ಯಸಂಧನಾದ ಶ್ರೀರಾಮಚಂದ್ರನು ಲೋಕಮಾತೆಯಾದ ಸೀತಾದೇವಿಯೊಂದಿಗೂ, ತಮ್ಮನಾದ ಲಕ್ಷ್ಮಣನೊಂದಿಗೂ ಈ ನಾಡಿನಲ್ಲಿ ಸಂಚರಿಸಿರುವುದಾಗಿ ಇತಿಹಾಸದಿಂದ ಗೊತ್ತಾಗುತ್ತದೆ. ಆವನಿಯ ಬೆಟ್ಟದಲ್ಲಿ ವಾಲ್ಮೀಕಿ ಋಷಿಯ ಆಶ್ರಮವಿದ್ದಿತೆಂದೂ ಕುಶ ಲವರು ಇಲ್ಲಿಯೇ ಹುಟ್ಟಿದರೆಂದೂ ಹೇಳುತ್ತಾರೆ. ಶ್ರೀರಾಮನಿಗೂ ಕುಶ ಲವರಿಗೂ ಇಲ್ಲಿ ಯುದ್ಧವಾಯಿತೆಂದು ಜನರು ಆ ಪ್ರದೇಶವನ್ನು ತೋರಿಸುತ್ತಾರೆ. ಪರಶುರಾಮನು ಈ ನಾಡಿನ ಅನೇಕ ಭಾಗಗಳಲ್ಲಿ ಸಂಚರಿಸಿ ರುವನೆಂಬುದಕ್ಕೆ ಪ್ರಮಾಣಗಳು ದೊರೆಯುತ್ತವೆ. ನಂಜನಗೂಡಿನ ಬಳಿಯಲ್ಲಿ

ಪರಶುರಾಮನು ತಪಸ್ಸು ಮಾಡಿದನಂತೆ. ಆ ಪ್ರದೇಶವನ್ನು ಪರಶುರಾಮ ಕ್ಷೇತ್ರವೆಂದು ಕರೆಯುತ್ತಾರೆ.

ಸತ್ಯವಂತರಾದ ಪಾಂಡುಕುಮಾರರೂ, ಕುಂತೀಮಾತೆಯೂ ಈ ನಾಡಿನಲ್ಲಿ ಕೆಲವು ಕಾಲ ವಾಸಮಾಡಿದರೆಂಬುದಾಗಿ ಪ್ರತೀತಿ ಇವೆ. ಚಿಂತಾಮಣಿಯ ಸಮೀಪದಲ್ಲಿರುವ ಕೈವಾರ ಎಂಬ ಗ್ರಾಮವೇ ಏಕಚಕ್ರನಗರವೆಂಬ ನಂಬುಗೆ ಇದೆ. ಇಲ್ಲಿರುವ ಬೆಟ್ಟದಲ್ಲಿದ್ದ ಬಕಾಸುರನನ್ನು ಭೀಮಸೇನನು ಸಂಹಾರ ಮಾಡಿ ಜನರಿಗೆ ತೊಂದರೆಯನ್ನು ತಪ್ಪಿಸಿದನು. ಪಂಚಪಾಂಡವರ ಹೆಸರಿನ ಪಂಚ ಶಿವಲಿಂಗಗಳು ಇಲ್ಲಿರುವ ಸೋಮೇಶ್ವರ ದೇವಾಲಯದಲ್ಲಿ ಪಾಂಡವರಿಂದ ಪ್ರತಿಷ್ಠಿತವಾಗಿರುತ್ತವೆ. ಚಿತ್ರದುರ್ಗ ಪ್ರಾಂತವನ್ನು ಹಿಡಿಂಬ ವನವೆಂಬುದಾಗಿ ಹೇಳುತ್ತಾರೆ. ಭೀಮಸೇನನು ಹಿಡಿಂಬಾಸುರನನ್ನು ಸಂಹಾರಮಾಡಿ ಅವನ ತಂಗಿ ಹಿಡಿಂಬೆಯನ್ನು ಮದುವೆಯಾದುದು ಇಲ್ಲಿಯೇ. ಈ ಬೆಟ್ಟದಲ್ಲಿರುವ ಸಿದ್ಧೇಶ್ವರ ದೇವಾಲಯದಲ್ಲಿ ಹಿಡಿಂಬಾಸುರನ ಹಲ್ಲನ್ನು ಇಟ್ಟಿರುತ್ತಾರೆ. ಅರ್ಜುನನು ಉತ್ತರದೇಶದಿಂದ ಹೊರಟು ತೀರ್ಥಯಾತ್ರೆ ಮಾಡುತ್ತ ಈ ನಾಡಿಗೆ ಬಂದಿದ್ದನೆಂಬುದಕ್ಕೆ ಆಧಾರಗಳುಂಟು. ಚಾಮರಾಜನಗರ ಸಮೀಪದಲ್ಲಿರುವ ಹರಳುಕೋಟೆ ಎಂಬ ಗ್ರಾಮವೇ ಹಿಂದೆ ಮಣಿಪುರವೆಂದು ಪ್ರಸಿದ್ಧವಾಗಿತ್ತು. ಆ ಪಟ್ಟಣದ ದೊರೆಯ ಮಗಳು ಚಿತ್ರಾಂಗದೆಯನ್ನು ಅರ್ಜುನನು ವಿವಾಹಮಾಡಿಕೊಂಡನು. ಈ ಅರ್ಜುನ–ಚಿತ್ರಾಂಗದೆಯರ ಮಗನೇ ಬಭ್ರುವಾಹನ. ಅವನು ಮಣಿಪುರದ ಅರಸನಾದನು. ಅಲ್ಲದೆ, ಧರ್ಮರಾಯನ ಯಜ್ಞಾಶ್ವವನ್ನು ಕಟ್ಟಿ, ಅರ್ಜುನನ ಮೇಲೆ ಯುದ್ಧಮಾಡಿ ಜಯಿಸಿದನು. ಮಹಾಭಾರತ ಕಾಲದಲ್ಲಿ ಪ್ರಸಿದ್ಧರಾಗಿದ್ದ ವಿರಾಟ ಮತ್ತು ಚಂದ್ರಹಾಸರು ಈ ನಾಡಿನ ಕೆಲವು ಭಾಗಗಳನ್ನು ಆಳುತ್ತಿದ್ದರು. ಪಾಂಡವರ ವಂಶಜನಾದ ಜನಮೇಜಯರಾಯನು ಈ ಸಂಸ್ಥಾನದಲ್ಲಿರುವ ಹಿರಿಯಮಗಳೂರು ಸಮೀಪದಲ್ಲಿ ಸರ್ಪಯಾಗವನ್ನು ಮಾಡಿ ಹರಿಹರೇಶ್ವರನ ಸನ್ನಿಧಿಯಲ್ಲಿ ಬ್ರಾಹ್ಮಣರಿಗೆ ಭೂದಾನ, ಗೋದಾನ, ಸುವರ್ಣದಾನಗಳನ್ನೂ, ಅಗ್ರಹಾರಗಳನ್ನೂ ದಾನವಾಗಿ ಕೊಟ್ಟನೆಂಬುದಾಗಿ ತಾಮ್ರಶಾಸನಗಳಿಂದ ವ್ಯಕ್ತವಾಗುತ್ತದೆ.

ಬಹಳ ಹಿಂದಿನ ಕಾಲದಲ್ಲಿಯೇ ಭದ್ರಬಾಹುವೆಂಬ ಜೈನಸಂನ್ಯಾಸಿಯು ಉತ್ತರದೇಶದಿಂದ ಬಂದು ಈ ದೇಶದಲ್ಲಿರುವ ಶ್ರವಣಬೆಳಗೊಳದ ಚಂದ್ರಗಿರಿ

ಯಲ್ಲಿದ್ದು ಅಲ್ಲಿಯೇ ಪರಮಪದವಿಯನ್ನು ಹೊಂದಿದನೆಂದೂ ಮತ್ತು ಆತನ
ಶಿಷ್ಯನಾದ ಚಂದ್ರಗುಪ್ತ ಅಥವಾ ಶ್ರೇಣಿಕ ಮಹಾರಾಜನು ಇಲ್ಲಿಯೇ ಮುಕ್ತ
ನಾದನೆಂದೂ ಚರಿತ್ರೆಯಿಂದ ಗೊತ್ತಾಗುತ್ತದೆ. ಜಿನದತ್ತರಾಯನೆಂಬುವನು
ತನ್ನ ತಂದೆ ಸಾಕಾರ ಮಹಾರಾಜನ ಕಾಟದಿಂದ ತಪ್ಪಿಸಿಕೊಂಡು ಉತ್ತರ
ಮಥುರಾನಗರದಿಂದ ಓಡಿಬಂದು ಈ ದೇಶದಲ್ಲಿರುವ ಹೊಂಬುಚ ಎಂಬ
ಸ್ಥಳದಲ್ಲಿ ರಾಜ್ಯವನ್ನು ಸ್ಥಾಪಿಸಿದನೆಂದು ಜೈನಪುರಾಣಗಳಲ್ಲಿ ಉಕ್ತವಾಗಿದೆ.

ಮೈಸೂರು ಸಂಸ್ಥಾನವನ್ನು ಸನಾತನ ಧರ್ಮದ ಪವಿತ್ರಭೂಮಿಯೆಂದು
ಕರೆಯಬಹುದು. ಅದ್ವೈತ ಮತಸ್ಥಾಪಕರಾದ ಶ್ರೀ ಶಂಕರಾಚಾರ್ಯರು
ಭರತಖಂಡದಲ್ಲೆಲ್ಲಾ ಸಂಚರಿಸಿ ವೇದಧರ್ಮವನ್ನು ಉದ್ಧಾರ ಮಾಡಿದರು.
ಅವರು ಈ ನಾಡಿನಲ್ಲಿರುವ ಶೃಂಗೇರಿಯಲ್ಲಿ ಮಠವನ್ನು ಸ್ಥಾಪಿಸಿದರು.
ತಮಿಳುನಾಡಿನ ಚೋಳರಾಜನು ಹಿಂಸೆಯಿಂದ ಪಾರಾಗಲು ಉತ್ತರದ ಕಡೆಗೆ
ಹೊರಟುಬಂದ ಶ್ರೀ ರಾಮಾನುಜಾಚಾರ್ಯರು ಈ ನಾಡಿನಲ್ಲಿ ಬಹಳ
ಕಾಲವಿದ್ದರು. ಆಗ ದ್ವಾರಸಮುದ್ರದಲ್ಲಿ ಆಳುತ್ತಿದ್ದ ಬಿಟ್ಟಿದೇವನೆಂಬ ಜೈನ
ದೊರೆಯು ಆಚಾರ್ಯರಿಗೆ ಆಶ್ರಯ ಕೊಟ್ಟನು. ತರುವಾಯ ಅವನು
ಅವರಿಂದ ಶ್ರೀವೈಷ್ಣವ ದೀಕ್ಷೆಯನ್ನು ಹೊಂದಿ ಅವರ ಶಿಷ್ಯನಾದನು.
ಅವರು ಮೇಲುಕೋಟೆಯಲ್ಲಿದ್ದುಕೊಂಡು ತಮ್ಮ ವಿಶಿಷ್ಟಾದ್ವೈತಮತವನ್ನು
ಪ್ರಚಾರಮಾಡಿದರು. ತರುವಾಯ, ಶ್ರೀ ಮಧ್ವಾಚಾರ್ಯರು ತಮ್ಮ ದ್ವೈತ
ಸಿದ್ಧಾಂತವನ್ನು ಪ್ರಚಾರಮಾಡಲು ಈ ನಾಡಿನಲ್ಲಿ ಸಂಚರಿಸಿದರು. ಈ
ಮೂವರು ಆಚಾರ್ಯರೂ ಸನಾತನಧರ್ಮ ಜ್ಯೋತಿಯನ್ನು ಬೆಳಗಿದರು.

ವೀರಶೈವಮತಸ್ಥಾಪಕರಾದ ಶ್ರೀ ರೇಣುಕಾಚಾರ್ಯರೂ ಈ ನಾಡಿನಲ್ಲಿ
ಸಂಚರಿಸಿ ತಮ್ಮ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚಾರಮಾಡಿದ
ರೆಂದು ಆ ಮತದ ಧರ್ಮ ಗ್ರಂಥಗಳಿಂದ ಗೊತ್ತಾಗುತ್ತದೆ. ಅವರು
ಬಾಳೆಹೊನ್ನೂರಿನಲ್ಲಿ ತಮ್ಮ ಮಠವನ್ನು ಸ್ಥಾಪಿಸಿದರು. ಅವರ ತರುವಾಯ
ಬಂದ ರುದ್ರಮುನಿ ಶಿವಾಚಾರ್ಯರು ಶಿವಗಂಗೆಯಲ್ಲಿ ತಪಸ್ಸು ಮಾಡಿಕೊಂಡಿದ್ದ
ರೆಂದು ಇತಿಹಾಸ ತಿಳಿಸುತ್ತದೆ. ಎಲ್ಲ ಧರ್ಮಗಳ ಸಮನ್ವಯವೂ ಈ ನಾಡಿನಲ್ಲಿ
ಕಾಣುತ್ತಿದೆ.

ಈ ನಾಡು ಧರ್ಮಭೂಮಿಯಾಗಿರುವಂತೆಯೇ ವೀರಭೂಮಿಯೂ ಆಗಿದೆ. ಇಲ್ಲಿ ಅನೇಕ ಪುಣ್ಯಕ್ಷೇತ್ರಗಳಿವೆ. ಯಾತ್ರಾಸ್ಥಳಗಳಿವೆ. ಅಲ್ಲಲ್ಲಿ ಹಿಂದಿನ ಕಾಲದ ಕೋಟೆ ಕೊತ್ತಲುಗಳಿವೆ; ಯುದ್ಧವೀರರ ಸ್ಮಾರಕಗಳಿವೆ ಮತ್ತು ಗಿರಿದುರ್ಗಗಳಿವೆ. ಅನೇಕ ರಾಜಮನೆತನಗಳು ಈ ನಾಡಿನಲ್ಲಿ ಹುಟ್ಟಿ ಹೆಸರುಗೊಂಡಿವೆ. ಶೂರರಾದ ರಾಜರು ದರ್ಪದಿಂದ ರಾಜ್ಯವಾಳಿ ಯಶೋವಂತರಾಗಿದ್ದಾರೆ. ಬಾಣರು ಅತ್ಯಂತ ಪುರಾತನ ವಂಶದವರು. ಇವರು ಈಗಿನ ಕೋಲಾರ ಪ್ರಾಂತದಲ್ಲಿ ಆಳುತ್ತಿದ್ದರು. ಇವರಂತೆಯೇ ನಾಗವಂಶದ ಸೇಂದ್ರಕರೂ ಪ್ರಾಚೀನ ಮನೆತನಕ್ಕೆ ಸೇರಿದವರು. ಅವರ ರಾಜ್ಯ ಶಿವಮೊಗ್ಗ ಪ್ರಾಂತದಲ್ಲಿತ್ತು. ಪುನ್ನಾಡು ರಾಜವಂಶದವರು ಮೈಸೂರು ಪ್ರಾಂತ್ಯದಲ್ಲಿ ಕಪಿಲಾನದಿಯ ತೀರದಲ್ಲಿರುವ ಕೀರ್ತಿಪುರದಲ್ಲಿ ಆಳುತ್ತಿದ್ದರು. ಗಂಗವಂಶದವರು ಮೊದಲು ಕೋಲಾರ ಸೀಮೆಯಲ್ಲಿ ಆಳುತ್ತಿದ್ದು ತರುವಾಯ ತಲಕಾಡಿಗೆ ಬಂದು ನಿಂತರು. ಹೊಯ್ಸಳ ರಾಜರು ಅತ್ಯಂತ ಪ್ರಸಿದ್ಧರಾಗಿದ್ದರು. ಇವರು ಹಾಸನ ಪ್ರಾಂತದಲ್ಲಿ ರಾಜ್ಯವಾಳಿದರು. ಇವರ ಆಳ್ವಿಕೆಯಲ್ಲಿ ನಮ್ಮ ನಾಡು ತುಂಬುಕಳೆಯಿಂದ ಬೆಳೆಯಿತು. ಈಗ ಕರ್ಣಾಟಕದಲ್ಲಿ ಏಕೈಕ ರಾಜಮನೆತನವಾಗಿ ಅಭಿವೃದ್ಧಿ ಹೊಂದುತ್ತಿರುವ ಮೈಸೂರು ಯದುವಂಶದ ಅಂತಶ್ಶಕ್ತಿಯಾಗಿ ನಿಂತಿತು. ವಿಜಯನಗರ ಸಾಮ್ರಾಜ್ಯ ಪತನವಾದಮೇಲೆ ಅನೇಕ ಸಾಮಂತ ರಾಜರು ಸ್ವತಂತ್ರವಾಗುತ್ತ ಬಂದರು. ಆಗ ಹದಿನಾಡು ರಾಜ್ಯವೂ ಸ್ವತಂತ್ರವಾಯಿತು. ಇದರಿಂದಲೇ ಮೈಸೂರು ರಾಜವಂಶ ರೂಪಗೊಂಡಿತು; ಯದುವಂಶ ಕೀರ್ತಿಲತೆ ಹಬ್ಬಿ ಬೆಳೆಯಿತು.

# ಅಧ್ಯಾಯ

## ಯದುವಂಶಾಭ್ಯುದಯ

ವಿಜಯನಗರ ಸಾಮ್ರಾಜ್ಯ ತನ್ನ ವೈಭವವನ್ನು ನೀಗಿಕೊಂಡಮೇಲ
ಹದಿನಾಡು ರಾಜ್ಯದ ದೊರೆ ಚಾಮರಾಜನು ಪ್ರಸಿದ್ಧನಾಗಿದ್ದನು. ಅವನಿಗ
ಗಂಡುಮಕ್ಕಳಿರಲಿಲ್ಲ. ಒಬ್ಬಳೇ ಮಗಳಿದ್ದಳು. ಕೆಲವು ಕಾಲದಮೇಲೆ ಈ
ದೊರೆ ಕಾಲವಾದನು. ಅವನ ರಾಣಿ ದೇವಾಜಮ್ಮಣ್ಣಿಯೇ ರಾಜಕಾರ್ಯ
ಗಳನ್ನು ನಡಸುತ್ತಿದ್ದಳು. ಮಗಳ ಹೆಸರೂ ದೇವಾಜಮ್ಮಣ್ಣಿಯೇ. ಅವಳು
ತುಂಬ ರೂಪವಂತೆ ಮತ್ತು ಗುಣವಂತೆ. ಆಕೆಯನ್ನು ಯೋಗ್ಯ ವರನಿಗ
ಕೊಟ್ಟು ಮದುವೆಮಾಡಬೇಕೆಂದು ತಾಯಿ ಚಿಂತಿಸುತ್ತಿದ್ದಳು. ಚಾಮರಾಜನ
ಸೇನಾಪತಿಯಾಗಿದ್ದ ಕಾರುಗಳ್ಳಿಯ ಮಾರನಾಯಕನು ದೇವಾಜಮ್ಮಣ್ಣಿ
ಯನ್ನು ಮದುವೆಯಾಗಬೇಕೆಂದು ಬಯಸುತ್ತಿದ್ದನು. ಕೀಳುಜಾತಿಯವನಿಗೆ
ಮಗಳನ್ನು ಕೊಡಲು ರಾಜಪತ್ನಿಯು ಒಪ್ಪಲಿಲ್ಲ. ನಾಯಕನು ಮಾತ್ರ ಆಕೆ
ಯನ್ನು ನಾನಾವಿಧವಾಗಿ ಪೀಡಿಸುತ್ತಲೇ ಇದ್ದನು. ತಾಯಿ ಮಗಳ ಮೇಲಣ
ಪ್ರೇಮದಿಂದ ಪರಿತಪಿಸುತ್ತಿದ್ದಳು. ಹೀಗಿರಲು, ಯದುರಾಯ ಮತ್ತು
ಕೃಷ್ಣರಾಯ ಎಂಬ ಇಬ್ಬರು ಸಹೋದರರು ಆಕೆಗೆ ನೆರವಾಗಿ ಬಂದರು.
ಈ ರಾಜಕುಮಾರರು ಶ್ರೀ ಕೃಷ್ಣನ ವಂಶದವರು. ಆ ವಂಶದಲ್ಲಿ ಜನಿಸಿದ
ರಾಜದೇವನೆಂಬುವನು ದ್ವಾರಕಾನಗರದಲ್ಲಿ ಬಹಳ ಕಾಲ ರಾಜ್ಯವಾಳುತ್ತಿದ್ದರು.
ಆತನ ಮಕ್ಕಳೇ ಈ ಯದುರಾಯ ಮತ್ತು ಕೃಷ್ಣರಾಯ. ಅವರಿಬ್ಬರೂ
ದ್ವಾರಕಿಯನ್ನು ಬಿಟ್ಟು ಯಾತ್ರಾರ್ಥಿಗಳಾಗಿ ದಕ್ಷಿಣದ ಕಡೆಗೆ ಹೊರಟು
ಬಂದರು. ಅವರು ಅಲ್ಲಲ್ಲಿ ಸಂಚರಿಸುತ್ತ ಯದುಗಿರಿಯ ಮಾರ್ಗವಾಗಿ
ಮೈಸೂರು ಪಟ್ಟಣದ ಬಳಿಗೆ ಬಂದರು. ಅವರು ಕೆಲವು ದಿನಗಳ ಪರ್ಯಂತ
ಬೆಟ್ಟದಮೇಲೆ ಚಾಮುಂಡೇಶ್ವರಿ ದೇವಿಯನ್ನು ಭಕ್ತಿಯಿಂದ ಆರಾಧಿಸು
ತ್ತಿದ್ದರು. ಅವರು ಒಂದು ದಿನ ಬೆಟ್ಟದ ತಪ್ಪಲಿನಲ್ಲಿರುವ ಕೆರೆಯ ಕೋಡಿ

ಭೈರವ ದೇವಾಲಯಲ್ಲಿದ್ದಾಗ ಹದಿನಾಡು ಪಟ್ಟಣದಿಂದ ಅಲ್ಲಿಗೆ ಬಂದಿದ್ದ ಜಂಗಮನ ಪರಿಚಯವಾಯಿತು. ಅವನು ಹದಿನಾಡು ರಾಜ್ಯದ ಪರಿಸ್ಥಿತಿಯನ್ನು ಯದುರಾಯರಿಗೆ ಹೇಳಿದನು. ಅಲ್ಲಿಂದ ಅವರಿಬ್ಬರೂ ಆ ಜಂಗಮನ ಸಂಗಡ ಹದಿನಾಡು ನಗರಕ್ಕೆ ಹೋಗಿ ದೇವಾಜಮ್ಮಣ್ಣಿಯನ್ನು ಸಂದರ್ಶಿಸಿದರು. ಆಕೆ ಅವರನ್ನು ನೋಡಿ ಸಂತೋಷಪಟ್ಟು, ತನ್ನ ಮಗಳನ್ನು ಯದುರಾಯನಿಗೆ ಕೊಟ್ಟು ಮದುವೆಮಾಡಬೇಕೆಂದು ನಿಶ್ಚಯಿಸಿದಳು.

ಇತ್ತ ಮಾರನಾಯಕನು ದಿನದಿನಕ್ಕೆ ಉನ್ಮತ್ತನಾಗಿ ವರ್ತಿಸುತ್ತಲೇ ಇದ್ದನು. ಅವನನ್ನು ಉಪಾಯಾಂತರದಿಂದ ನಿವಾರಿಸಬೇಕೆಂದು ಗೊತ್ತಾಯಿತು. ರಾಜಪುತ್ರಿಯನ್ನು ನಾಯಕನಿಗೆ ಕೊಟ್ಟು ಮದುವೆ ಮಾಡುವುದಾಗಿ ದೇವಾಜಮ್ಮಣ್ಣಿ ಅವನಿಗೆ ಹೇಳಿ ಕಳುಹಿಸಿದಳು. ಆ ಮಾತನ್ನು ಕೇಳಿ ಅವನು ಆನಂದದಿಂದ ಮೈಮರೆತನು. ಅವನು ಸಂಭ್ರಮದಿಂದ ಹದಿನಾಡು ರಾಜಧಾನಿಗೆ ಬಂದನು. ಆಗ ಯದುರಾಯ ಕೃಷ್ಣರಾಯರು ಆ ನಾಯಕನನ್ನು ಸಂಧಿಸಿ ಪರಾಕ್ರಮದಿಂದ ಹೋರಾಡಿದರು. ಆ ಯುದ್ಧದಲ್ಲಿ ಅವನು ಮಡಿದು ಬಿದ್ದನು.

ದೇವಾಜಮ್ಮಣ್ಣಿಯ ಸಂತೋಷಕ್ಕೆ ಪಾರವಿಲ್ಲದಂತಾಯಿತು. ಆಕೆ ಶುಭ ಲಗ್ನದಲ್ಲಿ ತನ್ನ ಪುತ್ರಿ ದೇವಾಜಮ್ಮಣ್ಣಿಯನ್ನು ಯದುರಾಯರಿಗೆ ಕೊಟ್ಟು ವೈಭವದಿಂದ ಮದುವೆಮಾಡಿದಳು. ಶುಭ ದಿನದಲ್ಲಿ ಯದುರಾಯರಿಗೆ ಪಟ್ಟಾಭಿಷೇಕವೂ ಆಯಿತು. ಈ ಯದುರಾಯರೇ ಮೈಸೂರು ಒಡೆಯರ ವಂಶದ ಮೂಲಪುರುಷರಾದರು. ಇವರ ವಂಶಕ್ಕೆ ಯದುವಂಶವೆಂದು ಹೆಸರಾಯಿತು. ಈ ಮನೆತನದ ದೊರೆಗಳಿಗೆ “ ಒಡೆಯರು ” ಎಂಬ ಹೆಸರು ಬಂದಿದೆ. ಕೃಷ್ಣರಾಯನು ಯುವರಾಜನಾದನು. ಆತನಿಗೆ ಕಳಲೆ ಮನೆತನದ ರಾಜಪುತ್ರಿಯನ್ನು ಕೊಟ್ಟು ವಿವಾಹವಾಯಿತು. ಆತನು ಕಾರುಗಳ್ಳಿಯ ದೊರೆಯಾದನು. ಈ ಅಣ್ಣತಮ್ಮಂದಿರು ಬಲರಾಮ ಕೃಷ್ಣರಂತಿದ್ದರು.

ಯದುರಾಯರ ತರುವಾಯ ಅವರ ಹಿರಿಯಮಗ ಹಿರಿಯ ಬೆಟ್ಟದ ಚಾಮರಾಜ ಒಡೆಯರು ಮೈಸೂರು ಪಟ್ಟಣದಲ್ಲಿ ನೆಲಸಿದರು. ಮೈಸೂರು ರಾಜ್ಯವನ್ನು ಪರಿಪಾಲಿಸಿದ ಒಡೆಯರ ವೀರ ಪಟ್ಟಾವಳಿಯನ್ನು ನೋಡಿದರೆ

ಒಬ್ಬೊಬ್ಬರೂ ಅಸಹಾಯಶೂರರೇ. ಈ ವಂಶದ ಒಂಬತ್ತನೆಯ ಪ್ರಭು ರಾಜ ಒಡೆಯರು ಇವರು ತುಂಬ ರಾಜನೀತಿ ಕುಶಲರು. ವಿಜಯನಗರದ ಕರ್ಣಾಟಕ ರತ್ನಸಿಂಹಾಸನವನ್ನು ರಾಜಒಡೆಯರು ಆ ಸಾಮ್ರಾಜ್ಯದ ಪ್ರತಿನಿಧಿಯಾಗಿ ಶ್ರೀರಂಗಪಟ್ಟಣದಲ್ಲಿದ್ದ ಶ್ರೀರಂಗರಾಯನಿಂದ ಪಡೆದರು. ಇವರ ಕಾಲದಲ್ಲಿ ಮೈಸೂರು ರಾಜ್ಯ ವಿಸ್ತಾರವಾಯಿತು. ಶ್ರೀರಂಗಪಟ್ಟಣ ಮೈಸೂರು ರಾಜ್ಯದ ರಾಜಧಾನಿಯಾಯಿತು. ದಸರಾ ಮಹೋತ್ಸವವು ರಾಜವೈಭವದಿಂದ ನಡೆಯಲು ಪ್ರಾರಂಭವಾದುದು ಇವರ ಕಾಲದಲ್ಲಿಯೇ.

ಇವರ ತರುವಾಯ ಪಟ್ಟಕ್ಕೆ ಬಂದವರಲ್ಲಿ ರಣಧೀರ ಕಂಠೀರವ ನರಸರಾಜ ಒಡೆಯರು, ದೊಡ್ಡ ದೇವರಾಜ ಒಡೆಯರು. ಚಿಕ್ಕದೇವರಾಜ ಒಡೆಯರು, ಮತ್ತು ದೊಡ್ಡ ಕೃಷ್ಣರಾಜ ಒಡೆಯರು ಅತ್ಯಂತ ಪ್ರಸಿದ್ಧರಾಗಿದ್ದಾರೆ. ಸತ್ಯಸಂಧರಾದ ಮೈಸೂರು ಯದುವಂಶದ ರಾಜರು ನಿಸ್ಸೀಮ ದೇವಭಕ್ತರು, ಸಾಹಸಪ್ರಿಯರು, ಪ್ರಜಾವತ್ಸಲರು. ಮೈಸೂರು ರತ್ನ ಸಿಂಹಾಸನವನ್ನು ಅಲಂಕರಿಸಿದ ಪ್ರಭುಗಳು ತಮ್ಮ ಭುಜಪರಾಕ್ರಮದಿಂದ ರಾಜ್ಯವನ್ನು ವಿಸ್ತರಿಸಿದರು. ನಾಡಿನ ಕೀರ್ತಿಯನ್ನು ಆಸೇತು ಹಿಮಾಚಲ ಪರ್ಯಂತ ಹಬ್ಬಿಸಿದರು. ಇಮ್ಮಡಿ ಕೃಷ್ಣರಾಜ ಒಡೆಯರು ಈ ಪ್ರಭು ಪಟ್ಟದಲ್ಲಿ ಹದಿನೆಂಟನೆಯವರು. ಅದುವರೆಗೆ ಆಳಿದ ರಾಜರು ಮೈಸೂರು ದೇಶದಲ್ಲಿ ಸುವರ್ಣ ಯುಗವನ್ನು ಸ್ಥಾಪಿಸಿದರು. ಜನಜೀವನ ರಾಜಕೀಯ ಪರಿಸ್ಥಿತಿ, ಸಾಹಿತ್ಯ, ಸಂಸ್ಕೃತಿಗಳು ಪುಷ್ಟಿಗೊಂಡು ರಾಜ್ಯದಲ್ಲಿ ಶಾಂತಿ ಸಮಾಧಾನಗಳು ತಾಂಡವವಾಡುತ್ತಿದ್ದುವು.

ದೊಡ್ಡ ಕೃಷ್ಣರಾಜ ಒಡೆಯರ ಕಾಲದಲ್ಲಿ ದಳವಾಯಿ ದೇವರಾಜಯ್ಯ, ಅವನ ತಮ್ಮ ಕರಾಚೂರಿ ನಂಜರಾಜಯ್ಯ ಮತ್ತು ಸರ್ವಾಧಿಕಾರಿ ನಂಜರಾಜಯ್ಯ ಎಂಬುವರು ದಿನದಿನಕ್ಕೆ ಪ್ರಬಲರಾಗುತ್ತಿದ್ದರು. ಅವರು ಎಲ್ಲ ರಾಜಕಾರ್ಯಗಳಲ್ಲಿಯೂ ಸ್ವತಂತ್ರರಾಗಿ ವರ್ತಿಸುತ್ತಿದ್ದರು. ಅವರ ಪ್ರಾಬಲ್ಯ ಇಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ತಪ್ಪಿಹೋಯಿತಾದರೂ ಆಗ ಮೈಸೂರು ಸೈನ್ಯದಲ್ಲಿ ಒಬ್ಬ ಸಣ್ಣ ಅಧಿಕಾರಿಯಾಗಿದ್ದ ಹೈದರ್ ಆಲಿಯ ಪ್ರಾಬಲ್ಯವು ಮತ್ತೊಂದು ಕಡೆಯಿಂದ ಬೆಳೆಯುತ್ತಾ ಬರುತ್ತಿತ್ತು. ಹೈದರ್ ಆಲಿ ಮತ್ತು ಅವನ ತರುವಾಯ ಅವನ ಮಗ ಟೀಪೂಸುಲ್ತಾನ್ ಇವರುಗಳ

ಕೈಯಿಂದ ರಾಜ್ಯಸೂತ್ರಗಳನ್ನು ಕಿತ್ತುಕೊಂಡು ಮೈಸೂರು ಪ್ರಭುವಂಶದ ಒಡೆಯರ ಅಮೃತಹಸ್ತಗಳಲ್ಲಿಟ್ಟು, ರಾಜ್ಯಲಕ್ಷ್ಮಿಯನ್ನು ಸಂತೈಸಿದವರೆಂದರೆ ಮಹಾರಾಣಿ ಲಕ್ಷ್ಮಮ್ಮಣ್ಣಿಯವರೇ. ಇವರು ಮೈಸೂರು ದೇಶದ ಮಹಾಮಾತೆ; ಭಾಗ್ಯವಿಧಾತೆ. ಇಮ್ಮಡಿ ಕೃಷ್ಣರಾಜ ಒಡೆಯರ ಧರ್ಮಪತ್ನಿ. ಇವರು ಪಟ್ಟ ಪರಿಶ್ರಮದಿಂದ ನಾವೀಗ ಮೈಸೂರು ಪ್ರಭುವರ್ಯರ ಸತ್ಪ್ರಜೆಗಳಾಗಿರುವ ಭಾಗ್ಯ ದೊರೆತಿದೆ.

# ಅಧ್ಯಾಯ ೧

## ಜೀವನ ಪರಿಚಯ

ಮೈಸೂರು ರಾಜವಂಶದ ಅಭ್ಯುದಯ ಸಾಧನೆಯಲ್ಲಿ ಅವಿಶ್ರಾಂತರಾಗಿ
ದುಡಿದ ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ಉತ್ತಮವಂಶದಲ್ಲಿ ಜನ್ಮ
ಧಾರಣೆ ಮಾಡಿದವರು. ಅವರ ತಂದೆಯ ಹೆಸರು ಕತ್ತಿ ಗೋಪಾಲರಾಜ
ಅರಸು. ಆತನ ಊರು ಬೆಟ್ಟದ ಕೋಟೆ. ಆತನು ಮಹಾಪರಾಕ್ರಮಿ;
ನಿಸ್ಸೀಮ ರಾಜಭಕ್ತ. ಆತನು ಪ್ರಾಪ್ತವಯಸ್ಕನಾದ ಮೇಲೆ ಮೈಸೂರು
ಸೈನ್ಯದಲ್ಲಿ ಕೆಲಸಕ್ಕೆ ಸೇರಿದನು. ಅನೇಕ ಯುದ್ಧಗಳಲ್ಲಿ ಧೈರ್ಯದಿಂದ
ಕಾದಾಡಿ ಮೈಸೂರಿಗೆ ಕೀರ್ತಿ ತಂದನು. ಆತನು ಶೂರನಾಗಿದ್ದಂತೆಯೇ
ದೈವಭಕ್ತನೂ ಆಗಿದ್ದನು. ಒಮ್ಮೆ ತಿರುಚನಾಪಳ್ಳಿಯ ನವಾಬ ಮಹಮ್ಮ
ದಲ್ಲಿಯ ಮೇಲೆ ಮೈಸೂರು ಒಡೆಯರು ಯುದ್ಧ ಹೂಡಿದರು. ಆಗ ಕತ್ತಿ
ಗೋಪಾಲರಾಜ ಅರಸು ಅತ್ಯಂತ ಪರಾಕ್ರಮದಿಂದ ಯುದ್ಧಮಾಡಿದನು.
ಮೈಸೂರಿಗೆ ಜಯವಾಯಿತು. ಆತನ ಪರಾಕ್ರಮವನ್ನು ಮೆಚ್ಚಿ ಪ್ರಭುಗಳು
ತುಂಬಿದ ಸಭೆಯಲ್ಲಿ ಆತನನ್ನು ಸನ್ಮಾನಿಸಿದರು. ಆತನು ಸೇನಾನಾಯಕ
ನಾಗಿ ಬೆಂಗಳೂರಿನಲ್ಲಿ ನಿಂತನು. ಆತನ ಧರ್ಮಪತ್ನಿ ಗುಣವಂತೆಯಾಗಿದ್ದಳು.
ಪತಿಗೆ ತಕ್ಕ ಸತಿಯಾಗಿ ಕುಟುಂಬ ಜೀವನದಲ್ಲಿ ಭಾಗ್ಯಲಕ್ಷ್ಮಿಯಂತಿದ್ದಳು.
ಈ ದಂಪತಿಗಳಿಗೆ ಬಹಳಕಾಲ ಮಕ್ಕಳಾಗಲಿಲ್ಲ. ಅವರು ಅನೇಕ ದಾನ
ಧರ್ಮಗಳನ್ನು ಮಾಡುತ್ತಿದ್ದರು; ದೇವತಾಪೂಜೆಗಳನ್ನು ನೆರವೇರಿಸಿದರು.
ಗೋಪಾಲರಾಜ ಅರಸು ರಾಜಸೇನಾ ಕಾರ್ಯಕ್ಕಾಗಿ ಕೊಲ್ಲಾಪುರಕ್ಕೆ ಒಂದು
ಸಲ ಹೋಗಿದ್ದಾಗ, ಅಲ್ಲಿರುವ ಆದಿಲಕ್ಷ್ಮಿದೇವಿಯ ದರ್ಶನಮಾಡಿ, ವಿಶೇಷ
ಪೂಜೆಯನ್ನು ನಡೆಸಿ, ಭಕ್ತಿಯಿಂದ ಆರಾಧಿಸಿದನು. ಅದೇ ದಿನ ರಾತ್ರಿ
ಬೆಳಗಿನ ಜಾಮ ಆದಿಲಕ್ಷ್ಮಿಯು ದಳಪತಿಯ ಸ್ವಪ್ನದಲ್ಲಿ ಕಾಣಿಸಿಕೊಂಡು
“ವೀರಾಗ್ರಣಿಯೆ, ನಿನ್ನ ಭಕ್ತಿಗೆ ನಾನು ಮೆಚ್ಚಿದೆನು. ನಾನು ನಿನ್ನ ಮನೆಯಲ್ಲಿ

ಸಂತಾನ ಲಕ್ಷ್ಮಿಯಾಗಿ ನಲಿಯುವೆನು. ನಿನಗೆ ಶುಭವಾಗಲಿ" ಎಂದು ಹೇಳಿದಳು. ಇದೇ ರೀತಿಯಾಗಿಯೇ ಆತನ ಪತ್ನಿಯೂ ಕನಸು ಕಂಡಳು. ಅರಸು ಆನಂದದಿಂದ ಎದ್ದು ಪ್ರಾತಃಕಾಲ ಪುನಃ ಶ್ರೀ ಲಕ್ಷ್ಮಿಯ ಸಂದರ್ಶನ ಮಾಡಿ, ಬೆಂಗಳೂರಿಗೆ ಹಿಂತಿರುಗಿದನು.

ಕೆಲವು ಕಾಲದ ಮೇಲೆ ಆತನ ಪತ್ನಿ ಗರ್ಭವತಿಯಾದಳು. ನವಮಾಸ ತುಂಬಿ, ಆಕೆ ಶುಭದಿನದಲ್ಲಿ ಕನ್ಯಾರತ್ನವನ್ನು ಪಡೆದಳು. ತಾಯಿತಂದೆಗಳಿಗೆ ಅತ್ಯಾನಂದವಾಯಿತು. ಆ ಮಗುವಿಗೆ ಲಕ್ಷ್ಮಮ್ಮಣ್ಣಿ ಎಂದು ಹೆಸರಿಟ್ಟರು. ಮಗು ದಿನದಿನಕ್ಕೆ ಬೆಳೆಯುತ್ತ ತಾಯಿತಂದೆಗಳ ಸಂತೋಷವನ್ನು ಹೆಚ್ಚಿಸುತ್ತಿತ್ತು. ತಾಯಿಯ ಕಣ್ಮಣಿಯಾಗಿ, ತಂದೆಯ ಆನಂದಲತೆಯಾಗಿ ಮಗಳು ನಲಿಯುತ್ತಿದ್ದಳು! ದಾದಿಯರು ಮಗುವನ್ನು ಎತ್ತಿಕೊಂಡು ಮುದ್ದಾಡಿ, ತೊಟ್ಟಿಲಿನಲ್ಲಿ ಮಲಗಿಸಿ ಜೋಗುಳವನ್ನು ಹಾಡುತ್ತಿದ್ದರು. ತಾಯಿ ಮಗುವನ್ನು ನೋಡಿ ತಣಿಯುತ್ತಿದ್ದಳು. ಮಗಳು ಅವರ ಜೀವನದ ವಸಂತಲಕ್ಷ್ಮಿಯಾದಳು!

ಮಗಳಿಗೆ ಐದು ವರ್ಷವಾಯಿತು. ಅಕ್ಷರಾಭ್ಯಾಸವನ್ನು ಮಾಡಿಸಲು ಯೋಗ್ಯ ಉಪಾಧ್ಯಾಯರನ್ನು ನೇಮಿಸಿದರು. ಆಕೆ ಬುದ್ಧಿವಂತೆ; ವಿನಯ ಸಂಪನ್ನೆ. ಹತ್ತು ವರ್ಷ ತುಂಬುವುದರಲ್ಲಿಯೇ ಆಕೆ ಸಂಗೀತ ಸಾಹಿತ್ಯ ಚಿತ್ರಕಲೆ ಮುಂತಾದ ಕುಶಲವಿದ್ಯೆಗಳಲ್ಲಿ ಪರಿಣತೆಯಾದಳು. ವಿನಯ, ದಯೆ, ದಾಕ್ಷಿಣ್ಯ, ಸೌಜನ್ಯ ಮುಂತಾದ ಗುಣಗಳು ಆಕೆಯಲ್ಲಿ ನೆಲಸಿದುವು. ಯಾರನ್ನೂ ಆಕೆ ಗಟ್ಟಿಯಾಗಿ ಮಾತನಾಡಸಿದವಳಲ್ಲ. ಎಲ್ಲರಲ್ಲಿಯೂ ಒಂದೇ ರೀತಿಯಾದ ಪ್ರೀತಿಯನ್ನಿಟ್ಟಿದ್ದಳು. ದಾದಿಯರನ್ನು ಗದರಿಸಿ ಕೊಂಡವಳಲ್ಲ; ಸಂಗಾತಿಯರನ್ನು ಅಲಕ್ಷಿಸಿದವಳಲ್ಲ. ಬಡವರನ್ನೂ ಅನಾಥರನ್ನೂ ಕಂಡರೆ ಅವರನ್ನು ಆದರದಿಂದ ಸಂತೈಸುತ್ತಿದ್ದಳು. ಇದರಂತೆಯೇ ಆಕೆಯಲ್ಲಿ ದೈವಭಕ್ತಿ ತುಂಬಿತ್ತು. ಗೌರೀಪೂಜೆಯನ್ನು ಭಕ್ತಿಯಿಂದ ಮಾಡುತ್ತಿದ್ದಳು. ಆಕೆ ಪ್ರಶಾಂತ ಮನಸ್ಸಿನಿಂದ ಜನರಲ್ಲಿ ನಡೆದುಕೊಳ್ಳುತ್ತಿದ್ದಳು. ಕೋಪವೆಂಬುದನ್ನೇ ಅರಿಯಳು; ಸದಾ ಹಸನ್ಮುಖಿಯಾಗಿದ್ದಳು.

ಲಕ್ಷ್ಮಮ್ಮಣ್ಣಿಗೆ ಹದಿನಾರು ವರ್ಷವಾಯಿತು. ತುಂಬು ಹರೆಯದಲ್ಲಿ ಆಕೆ ಸಾಕ್ಷಾತ್ ಮಹಾಲಕ್ಷ್ಮಿಯಂತೆಯೇ ಇದ್ದಳು. ತವರುಮನೆಯ

ಸಿರಿದೇವಿಯಾಗಿ ನಲಿಯುತ್ತಿದ್ದ ಮಗಳನ್ನು ಯೋಗ್ಯ ವರನಿಗೆ ಕೊಟ್ಟು ವಿವಾಹ ಮಾಡಬೇಕೆಂದು ತಾಯಿತಂದೆಗಳು ಚಿಂತಿಸುತ್ತಿದ್ದರು. ಅವರಿಗೆ ಲಕ್ಷ್ಮಮ್ಮಣ್ಣಿಯ ತರುವಾಯ ನಾಲ್ವರು ಹೆಣ್ಣುಮಕ್ಕಳು ಹುಟ್ಟಿದರು. ಅವರೆಲ್ಲರೂ ವಿದ್ಯಾಬುದ್ಧಿಗಳಲ್ಲಿ ಒಬ್ಬರನ್ನೊಬ್ಬರು ಮೀರಿಸುತ್ತಿದ್ದರು. ಈ ಐದು ಜನ ಹೆಣ್ಣುಮಕ್ಕಳೂ ಮನೆತುಂಬ ಬೆಳಕಾಗಿದ್ದರು!

ಆಗ ಮೈಸೂರು ಪ್ರಭು ಇಮ್ಮಡಿ ಕೃಷ್ಣರಾಜ ಒಡೆಯರು. ಅವರಿಗೆ ಇಬ್ಬರು ಪತ್ನಿಯರಿದ್ದರು. ಕಳಲೆ ಕರಾಚೂರಿ ನಂಜರಾಜಯ್ಯನ ಪುತ್ರಿ ಪುಟ್ಟಮ್ಮಣ್ಣಿಯವರು ಒಡೆಯರ ಪಟ್ಟಮಹಿಷಿ; ಬೇಲೂರು ವೆಂಕಟರಾಜಯ್ಯನ ಪುತ್ರಿ ದೇವಾಜಮ್ಮಣ್ಣಿಯವರು ಎರಡನೆಯ ಹೆಂಡತಿ. ಒಡೆಯರಿಗೆ ಮೂರು ಮಂದಿ ಪುತ್ರರು ಹುಟ್ಟಿ, ಅವರೆಲ್ಲರೂ ಚಿಕ್ಕವಯಸ್ಸಿನಲ್ಲಿಯೇ ಕಾಲವಾಗಿದ್ದರು. ಮುಂದೆ ಉತ್ತರಾಧಿಕಾರಿಯಾಗುವ ಸಂತಾನವಿರಲಿಲ್ಲ. ಆದ್ದರಿಂದ ಅವರು ಮತ್ತೊಂದು ವಿವಾಹವನ್ನು ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದರು. ರಾಜಬಂಧು ವರ್ಗದಲ್ಲಿ ಸರದಾರ ಕತ್ತಿ ಗೋಪಾಲರಾಜ ಅರಸಿನ ಪುತ್ರಿ ಲಕ್ಷ್ಮಮ್ಮಣ್ಣಿಯವರು ರೂಪವತಿಯರೆಂದೂ ಸುಶೀಲನತೆಯರೆಂದೂ ಒಡೆಯರಿಗೆ ಗೊತ್ತಾಯಿತು. ಅವರು ಆಕೆಯನ್ನು ವಿವಾಹ ಮಾಡಿಕೊಳ್ಳಬೇಕೆಂದು ಯೋಚಿಸಿ ಅರಮನೆಯ ಪುರೋಹಿತರ ಮೂಲಕ ಸರದಾರನಿಗೆ ತಿಳಿಸಿ, ಆತನ ಮಗಳನ್ನು ಪಾಣಿಗ್ರಹಣ ಮಾಡಿಕೊಡಬೇಕೆಂದು ಕೇಳಿದರು. ಆ ಮಾತಿಗೆ ಗೋಪಾಲರಾಜ ಅರಸು ಸಂತೋಷದಿಂದ ಒಪ್ಪಿ, ವಿವಾಹವನ್ನು ನಿಶ್ಚಯಿಸಿದರು. ಒಡೆಯರು ಶ್ರೀ ಲಕ್ಷ್ಮಮ್ಮಣ್ಣಿಯವರ ಕೈಹಿಡಿದರು. ತಮ್ಮ ಹಿರಿಯ ಮಗಳು ಮೈಸೂರು ರಾಜಪತ್ನಿಯಾದಮೇಲೆ, ತನ್ನ ಇತರ ಹೆಣ್ಣು ಮಕ್ಕಳಿಗೂ ಸರದಾರನು ಮದುವೆಮಾಡಿದನು.

ಇಮ್ಮಡಿ ಕೃಷ್ಣರಾಜ ಒಡೆಯರು ದಕ್ಷರೂ, ಕಾರ್ಯಚತುರರೂ ಆಗಿದ್ದರು. ಧರ್ಮದಿಂದ ಪ್ರಜಾಪರಿಪಾಲನೆ ಮಾಡುತ್ತ ಮೈಸೂರು ನಾಡಿನ ಅಭ್ಯುದಯವನ್ನು ಸಾಧಿಸುತ್ತಿದ್ದರು. ಆಗ ಮಹಾರಾಜರ ಬಳಿಯಲ್ಲಿ ಪ್ರಮುಖರಾಗಿದ್ದವರೆಂದರೆ, ದಳವಾಯಿ ದೇವರಾಜಯ್ಯ, ಸರ್ವಾಧಿಕಾರಿ ನಂಜರಾಜಯ್ಯ ಕರಾಚೂರಿ ನಂಜರಾಜಯ್ಯ, ಪ್ರಧಾನ ಕನ್ನಂಬಾಡಿ ವೆಂಕಟಪತಯ್ಯ,

ಪ್ರಧಾನ ಬಾಗಿಲ ಕಂದಾಚಾರದ ಚನ್ನಪ್ಪಯ್ಯ, ನವಾಬ ಹೈದರ್ಆಲಿ ಖಾ್ನ್, ದಿವಾನ್ ಖಂಡೇರಾಯ.

ಇಮ್ಮಡಿ ಕೃಷ್ಣರಾಜ ಒಡೆಯರು ಮೂರು ವರ್ಷದ ಮಗುವಾಗಿದ್ದಾಗಲೇ ಪಟ್ಟಕ್ಕೆ ಬಂದರು. ಆಗ ಅವರ ತಾಯಿ ದೇವಾಜಮ್ಮಣ್ಣಿಯವರು ದಳವಾಯಿ ದೇವರಾಜಯ್ಯ ಮತ್ತು ನಂಜರಾಜಯ್ಯ ಈ ಇಬ್ಬರ ಸಹಾಯದಿಂದ ರಾಜ್ಯಾಡಳಿತಗಳನ್ನು ನಡಸುತ್ತಿದ್ದರು. ಇವರು ತಾವೇ ತಾವಾಗಿ ವರ್ತಿಸುತ್ತಿದ್ದರು. ಅರಮನೆಗೆ ಬರುತ್ತಿದ್ದ ವಾರದ ದವಸ, ಕಂದಾಯ ಕಾಳಿಗೆಗಳಲ್ಲಿ ಬಹುಭಾಗ ದಳವಾಯಿಗಳಿಗೆ ಸೇರುತ್ತಿತ್ತು. ಆಡಳಿತವೆಲ್ಲ ಇವರ ಕೈಸೇರಿತು. ಸರ್ವಾಧಿಕಾರಿ ನಂಜರಾಜಯ್ಯನ ಕಾಲವಾದಮೇಲೆ ಕರಾಚೂರಿ ನಂಜರಾಜಯ್ಯನು ಸರ್ವಾಧಿಕಾರಿಯಾದನು. ಒಡೆಯರು ಪ್ರಾಪ್ತ ವಯಸ್ಕರಾದ ತರುವಾಯ ತಾವೇ ರಾಜಕಾರ್ಯಗಳನ್ನು ಸ್ವತಂತ್ರವಾಗಿ ನಡೆಯಿಸತೊಡಗಿದರು. ಒಡೆಯರ ಪಟ್ಟಮಹಿಷಿ ಪುಟ್ಟಮ್ಮಣ್ಣಿಯವರು ಕರಾಚೂರಿ ನಂಜರಾಜಯ್ಯನ ಪುತ್ರಿಯಾದ್ದರಿಂದ ಅವನಿಗೆ ಆಡಳಿತದಲ್ಲಿ ಹೆಚ್ಚು ಸ್ವತಂತ್ರವಿತ್ತು. ಒಡೆಯರು ಮಾತ್ರ ಈ ಸರ್ವಾಧಿಕಾರಿಯ ಮೇಲೆ ಕಣ್ಣಿಟ್ಟಿದ್ದರು. ಆ ಅಣ್ಣತಮ್ಮಂದಿರನ್ನು ಕೆಲಸದಿಂದ ತೆಗೆದುಹಾಕಬೇಕೆಂದು ಯೋಚಿಸಿದರು. ಅವರು ತಮ್ಮ ಅಧಿಕಾರಕ್ಕೆ ಚ್ಯುತಿ ಬರುವುದೆಂದು ಯೋಚಿಸಿ, ದ್ರೋಹಚಿಂತನೆಗೆ ಯತ್ನಿಸಿದರು. ತಮ್ಮ ಹೆಣ್ಣುಮಗಳ ಸೌಭಾಗ್ಯವನ್ನೂ ಗಮನಿಸದೆ ಒಡೆಯರಮೇಲೆ ಕೈಮಾಡಬೇಕೆಂದು ನಿರ್ಧರಿಸಿದರು.

ಮೈಸೂರು ಸೈನ್ಯ ಹೈದರಾಲಿಯ ಕೈಕೆಳಗೆ ದಿಂಡಿಗಲ್ಲು ಪ್ರಾಂತಕ್ಕೆ ಹೋಗಿತ್ತು. ಇಂಥ ಸಮಯದಲ್ಲಿ ಕರಾಚೂರಿಯು ತನ್ನ ಕಡೆಯ ಜನರನ್ನು ಅರಮನೆಯ ಸುತ್ತಲೂ ಕಾವಲಿಟ್ಟು ಅರಮನೆಯ ಬಾಗಿಲಿಗೆ ನಾಲ್ಕು ಫಿರಂಗಿಗಳನ್ನು ಎತ್ತಿಕಟ್ಟಿ ಗುಂಡು ಹೊಡೆಯಿಸಿದನು. ಆಗ ಒಡೆಯರು ಬೆಚ್ಚಿಬಿದ್ದು ಅರೆಕ್ಷಣದಲ್ಲಿ ವಿಚಾರವನ್ನು ತಿಳಿದರು. ಕೂಡಲೇ ಒಡೆಯರು ಕತ್ತಿಯನ್ನು ಹಿಡಿದು ಅರಮನೆಯಿಂದ ಹೊರಗೆ ಬಂದು ನಂಜರಾಜಯ್ಯನ ಕಡೆಯವರನ್ನು ಹೊಡೆದೋಡಿಸಿದರು. ಸರ್ವಾಧಿಕಾರಿಯು ಕಾಲಿಗೆ ಬುದ್ಧಿ ಹೇಳಿದನು. ಒಡೆಯರು ಅವನನ್ನು ಹಿಡಿತರಿಸಿ ಶಿಕ್ಷೆ ಮಾಡಿಸಬೇಕೆಂದು ಆಜ್ಞೆಮಾಡಿದರು. ಆದರೆ ಪುಟ್ಟಮ್ಮಣ್ಣಿಯವರು ತಮ್ಮ ತಂದೆಯ ತಪ್ಪನ್ನು ಕ್ಷಮಿಸಿ ಕಾಪಾಡ

ಬೇಕೆಂದು ಒಡೆಯರನ್ನು ಪ್ರಾರ್ಥಿಸಿಕೊಂಡುದುದರಿಂದ, ಅವರು ಅವನನ್ನು ಮನ್ನಿಸಿ, ಅವನಿಗೆ ಜೀವನಾಂಶವನ್ನು ಕೊಟ್ಟು ಕೋಣನೂರಿನಲ್ಲಿರಿಸಿದರು. ಮುಂದೆ ಹೈದರಾಲಿಯೇ ಸರ್ವಾಧಿಕಾರಿಯಾದನು.

ಲಕ್ಷ್ಮಮ್ಮಣ್ಣಿಯವರು ರಾಜ್ಯದ ಪರಿಸ್ಥಿತಿಯನ್ನು ಕುತೂಹಲದಿಂದ ತಿಳಿಯುತ್ತಿದ್ದರು. ವೀರಪುತ್ರಿಯಾಗಿದ್ದುದರಿಂದ ಒಡೆಯರ ಶಕ್ತಿ ಸಾಹಸ ಗಳನ್ನು ಕಂಡು ಹರ್ಷಿಸುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ಒಡೆಯರಿಗೆ ಸಲಹೆಗಳನ್ನು ಕೊಡುತ್ತ ರಾಜಕಾರ್ಯಗಳಲ್ಲಿ ನೆರವಾಗುತ್ತಿದ್ದರು. ಒಡೆಯರೂ ತಮ್ಮ ಕಿರಿಯ ಪತ್ನಿಯಲ್ಲಿ ಪ್ರೀತಿಯಿಂದ ಇದ್ದರು. ಆಕೆಯ ಕಾರ್ಯ ಚತುರತೆ, ಸಮಯಸ್ಫೂರ್ತಿ, ರಾಜಕಾರ್ಯಾಸಕ್ತಿ, ಪ್ರಜಾವಾತ್ಸಲ್ಯ, ಸೇವಾ ತತ್ಪರತೆ, ಪತಿಭಕ್ತಿ ಮುಂತಾದ ಸದ್ಗುಣಗಳನ್ನು ಕಂಡು ಒಡೆಯರು ಸಂತೋಷ ಪಡುತ್ತಿದ್ದರು. ಲಕ್ಷ್ಮಮ್ಮಣ್ಣಿಯವರಿಗೆ ಪತಿಯ ಸೇವಾಭಾಗ್ಯ ಬಹಳ ದಿನವಿರಲಿಲ್ಲ. ಅವರಿಗೆ ಚಾಮಮ್ಮಣ್ಣಿಯೆಂಬ ಒಬ್ಬಳೇ ಮಗಳಿದ್ದಳು. ಒಡೆಯರಿಗೆ ಪುತ್ರಸಂತಾನವಿರಲಿಲ್ಲ. ಆಗಿನ್ನೂ ಕಿರಿಯ ಹೆಂಡತಿ ಲಕ್ಷ್ಮಮ್ಮಣ್ಣಿ ಯವರಿಗೆ ಇಪ್ಪತ್ತುನಾಲ್ಕು ವರ್ಷ ವಯಸ್ಸು. ಅಷ್ಟು ಚಿಕ್ಕವಯಸ್ಸಿನಲ್ಲಿಯೇ ಅವರಿಗೆ ವೈಧವ್ಯಪ್ರಾಪ್ತವಾಯಿತು. ಆ ದುಃಖದಲ್ಲಿ ಅವರಿಗೆ ಧೈರ್ಯ ಹೇಳತಕ್ಕ ಆಪ್ತರಾಗಲಿ ಹಿರಿಯರಾಗಲಿ ಇರಲಿಲ್ಲ. ಒಡೆಯರು ಕಾಲವಾದಾಗ ಹೈದರಾಲಿಯು ಕಲ್ಲಿಕೋಟೆಯಲ್ಲಿದ್ದನು. ಈ ವರ್ತಮಾನವನ್ನು ಕೇಳಿ ಅವನು ಆಗ ಶ್ರೀರಂಗಪಟ್ಟಣದ ಕಿಲ್ಲೇದಾರನಾಗಿದ್ದ ಮೊಖದುಂ ಸಾಬಿಯನ್ನು ಕರೆದು—“ ನೀನು ಅರಮನೆಗೆ ಹೋಗಿ ಅಂತಃಪುರದ ರಾಜಸ್ತ್ರೀಯರಿಗೆ ನನ್ನ ದುಃಖವನ್ನು ಸೂಚಿಸಿ, ಸಮಾಧಾನವನ್ನು ಹೇಳಿ, ಒಡೆಯರ ಉತ್ತರ ಕ್ರಿಯೆ ಗಳನ್ನು ನಡಸಲು ತಕ್ಕ ಏರ್ಪಾಟುಗಳನ್ನು ಮಾಡಿಸು ಮತ್ತು ಪಟ್ಟಾಭಿಷೇಕ ಕಾರ್ಯಗಳನ್ನು ಸಾಂಗವಾಗಿ ನೆರವೇರಿಸಲು ಸಿದ್ಧಮಾಡು ” ಎಂದು ಹೇಳಿ ಕಳುಹಿಸಿದನು.

ಒಡೆಯರು ಕಾಲವಾದ್ದರಿಂದ ಮೈಸೂರು ಅರಮನೆ ದುಃಖಭಾಜನ ವಾಯಿತು. ರಾಜಪತ್ನಿಯರ ಶೋಕಕ್ಕೆ ಪಾರವಿಲ್ಲದಂತಾಯಿತು.

# ಅಧ್ಯಾಯ ೪

## ಕಾರ್ಗತ್ತಲೆ ; ಹೊಂಬೆಳಕು

ಇಮ್ಮಡಿ ಕೃಷ್ಣರಾಜ ಒಡೆಯರು ಕಾಲವಾದಮೇಲೆ ಲಕ್ಷ್ಮಮ್ಮಣ್ಣಿಯವರ ಜೀವನ ಅಂಧಕಾರಮಯಸಾಯಿತು. ತನ್ನವರೆಂಬ ಜನವಿಲ್ಲ; ನಂಬುಗೆಯ ಹಿರಿಯರಿಲ್ಲ; ನಚ್ಚಿನ ನಂಟರಿಲ್ಲ. ಅರಮನೆಯ ವಾಸ ಅವರಿಗೆ ಸೆರೆಮನೆಯ ವಾಸವಾಯಿತು. ಚಿಕ್ಕವಯಸ್ಸಿನಲ್ಲಿ ಕೈಹಿಡಿದ ಪತಿಯನ್ನು ಚಿರದುಃಖದಲ್ಲಿ ಕುದಿಯುವಂತಾಯಿತು. ಒಡಲಬೇಗೆಯಲ್ಲಿ ಮರಮರನೆ ಮರುಗುತ್ತಿದ್ದರು. ಜೀವನದಲ್ಲಿ ಅವರು ಯಾವ ಸುಖಕ್ಕಾಗಿ ಬದುಕಿರಬೇಕೆಂದು ಯೋಚಿಸುತ್ತಿದ್ದರು! ಅವರಿಗಿದ್ದುದು ಒಂದೇ ಆಸೆ. ಮೈಸೂರು ರಾಜಮನೆತನದ ಕೀರ್ತಿಯನ್ನು ಉಳಿಸಬೇಕೆಂಬುದು. ಅದಕ್ಕಾಗಿ ಅಕರು ಬದುಕಿದ್ದರು!

ಅವರ ಪತಿಯ ಕಾಲಾನಂತರ ಬೆಟ್ಟದ ಚಾಮರಾಜ ಒಡೆಯರೆಂಬುವರು ಪಟ್ಟಕ್ಕೆ ಬಂದರು. ಅವರಿಗೆ ಆಗ ಕೇವಲ ಹತ್ತು ವರ್ಷ ವಯಸ್ಸು. ಹೈದರಾಲಿಯೇ ಸರ್ವಾಧಿಕಾರಿಯಾಗಿದ್ದನು. ಇವನು ಸುಮಾರು ಆರು ವರ್ಷ ಕಾಲ ಹೆಸರಿಗೆ ಮಾತ್ರ ದೊರೆಯಾಗಿದ್ದರು. ಇವರಿಗಿಂತ ಮುಂಚೆಯೇ ನಂಜರಾಜ ಒಡೆಯರು ಪ್ರಭು ಪದವಿಗೆ ಬಂದಿದ್ದರು. ಅವರಿಗೆ ನಾಲ್ಕು ವರ್ಷ ವಯಸ್ಸು. ಅವರು ನಾಲ್ಕು ವರ್ಷ ಮಾತ್ರವೇ ಬದುಕಿದ್ದರು. ಹೀಗೆ ಈ ಹತ್ತು ವರ್ಷ ಕಾಲವೂ ಲಕ್ಷ್ಮಮ್ಮಣ್ಣಿಯವರು ಕಣ್ಣೀರಿನಲ್ಲಿ ಕೈತೊಳೆಯಬೇಕಾಯಿತು. ಹೈದರಾಲಿಯು ತಾನೇತಾನಾಗಿ ಆಡಳಿತಗಳನ್ನು ನಡಸುತ್ತಿದ್ದನು. ಲಕ್ಷ್ಮಮ್ಮಣ್ಣಿಯವರ ಮಾತಿನಲ್ಲಿ ಅವನಿಗೆ ಅಲಕ್ಷ್ಯ; ಅವರ ಜೀವನ ಸೌಕರ್ಯಗಳನ್ನು ಒದಗಿಸುವುದರಲ್ಲಿ ಅವನಿಗೆ ಔದಾಸೀನ್ಯ! ಮಹಾರಾಜರ ಪತ್ನಿಯಾಗಿ ಸುಖಸುಪ್ಪತ್ತಿಯಲ್ಲಿ ಮೆರೆಯುವ ಭಾಗ್ಯ ಕಣ್ಮರೆ

ಯಾಗಿ, ಹಲುಬುತ್ತಿದ್ದರು. ಅವರ ಸುತ್ತಮುತ್ತಲೂ ಆಪ್ತರಾಗಲಿ, ಬಂಧು
ಜನಗಳಾಗಲಿ ಸುಳಿಯುವಂತಿರಲಿಲ್ಲ.

ಮೈಸೂರು ರಾಜ ವಂಶದಲ್ಲಿ ಪುತ್ರಸಂತಾನವಿರಲಿಲ್ಲ. ಪ್ರಭು ಪಟ್ಟಕ್ಕೆ
ಸರಿಯಾದ ರಾಜ ಬಂಧುವನ್ನು ಆರಿಸಿ ಲಕ್ಷ್ಮಮ್ಮಣ್ಣಿಯವರು ದತ್ತು ಸ್ವೀಕಾ
ಮಾಡಿಕೊಳ್ಳಬೇಕೆಂದು ಯೋಚಿಸಿದರು. ಅವರು ತಮ್ಮ ತಂಗಿಯ ಮ
ಕಳಲೆ ಮನೆತನದ ನರಸರಾಜಯ್ಯನನ್ನಾಗಲಿ, ತಮ್ಮ ಸವತಿಯ ಮಗಳ ಮ
ತಗಡೂರು ಸಿದ್ದರಾಜಯ್ಯನನ್ನಾಗಲಿ ದತ್ತುಮಾಡಿಕೊಂಡು ಪಟ್ಟಾಭಿಷೇಕವನ್ನು
ನೆರವೇರಿಸುವಂತೆ ನಿರ್ಧರಿಸಿದರು ಈ ಅಭಿಪ್ರಾಯವನ್ನು ಹೈದರಾಲಿಗೆ ತಿಳಿಸಿ
ದರು. ಅವನು ಅರಮನೆಗೆ ಬಂದು ತೆರೆಯ ಮರೆಯಲ್ಲಿ ಆಪ್ತ ಸಖಿಯರೊಂದಿ
ಕುಳಿತಿದ್ದ ಲಕ್ಷ್ಮಮ್ಮಣ್ಣಿಯವರಿಗೆ ಅಭಿವಂದಿಸಿ, "ತಾಯಿ,* ಸರ್ವೋತ್ತಮ
ವಾದ ತಮ್ಮ ವಂಶವು ಯೋಗ್ಯರಾದ ಪುತ್ರರಿಂದ ಪ್ರಕಾಶವನ್ನು ಪಡೆಯಬೇಕೆ
ಹೊರತು ಬೇರೆಯಿಲ್ಲ. ತಮ್ಮ ವಂಶದವರು ಆಸೇತು ಹಿಮಾಚಲಪರ್ಯಂ
ಪ್ರಸಿದ್ಧರಾಗಿಯೂ ಮಹಾಪರಾಕ್ರಮಶಾಲಿಗಳಾಗಿಯೂ ಮಹಾದಾತೃಗಳ
ಗಿಯೂ ಧರ್ಮದಲ್ಲಿಯೇ ಆಸಕ್ತರಾಗಿಯೂ ಇದ್ದುದಲ್ಲದೆ, ಸೌಂದರ್ಯಾ
ಗುಣಗಳಿಂದಲೂ ಯುಕ್ತರಾಗಿ ಇದ್ದಕಾರಣ ತಾವು ಅದೇ ಸದ್ಗುಣವುಳ್ಳ
ಪುತ್ರರನ್ನು ಪರೀಕ್ಷಿಸಿ ಸ್ವೀಕಾರಮಾಡಿಕೊಂಡು ಪಟ್ಟವನ್ನು ಕಟ್ಟಬೇಕು
ಈಗ ತಾವು ಸ್ವೀಕಾರಮಾಡಿಕೊಳ್ಳಬೇಕೆಂದು ನಿಶ್ಚಯ ಮಾಡಿಕೊಂಡಿರು
ಪುತ್ರರುಗಳಲ್ಲಿ ಒಬ್ಬರು ವಕ್ರವಾದ ಕುಂಟುಕಾಲುಳ್ಳವರಾಗಿಯೂ ಮತ್ತೊಬ್ಬರ
ಮಂಕಾದ ಬುದ್ಧಿಯುಳ್ಳವರಾಗಿಯೂ ಶ್ವೇತಕುಷ್ಠರೋಗವುಳ್ಳವರಾಗಿಯೂ
ಇರುವರು. ಆದಕಾರಣ ಇವರಿಬ್ಬರನ್ನು ಬಿಟ್ಟು ಇವರಿಗಿಂತ ಸೌಂದರ್ಯಾದ
ನೇಕ ಗುಣಗಳುಳ್ಳ ಬಾಲಕರುಗಳನ್ನು ಕರೆಸಿ, ಅವರುಗಳ ಪರೀಕ್ಷೆಯನ್ನು
ಮಾಡುವ ಕಾರ್ಯದಲ್ಲಿ, ಈ ಸಂಸ್ಥಾನಕ್ಕೆ ಮುಖ್ಯಾಭಿಮಾನಿಯಾದ ಶ್ರೀ
ಚಾಮುಂದೇಶ್ವರೀ ಅಮ್ಮನವರು ಪೂರ್ವಪುಣ್ಯಪ್ರಭಾವದಿಂದ ಯಾರ
ಕಟಾಕ್ಷವನ್ನಿಡುವರೋ ಅವರೇ ರಾಜಪದವಿಗೆ ಯೋಗ್ಯರಾಗಿರುವರು. ಅವ
ಬುದ್ಧಿಯನ್ನು ಪರೀಕ್ಷೆಮಾಡಿ ಅವರನ್ನು ಸ್ವೀಕಾರಮಾಡಿಕೊಂಡು ಪಟ್ಟವನ
ಕಟ್ಟಬೇಕು" ಎಂದು ತನ್ನ ಅಭಿಪ್ರಾಯವನ್ನು ಅರಿಕೆ ಮಾಡಿದನು.

---

* ಶ್ರೀಮನ್ಮಹಾರಾಜರವರ ವಂಶಾವಳಿ ಗ್ರಂಥದಿಂದ ಉದ್ಧರಿಸಿದ್ದು.

ಲಕ್ಷ್ಮಮ್ಮಣ್ಣಿಯವರು ತಮ್ಮ ಇಷ್ಟದಂತೆ ತಮಗೆ ಬೇಕಾದವರನ್ನು ಆರಿಸಿಕೊಂಡು ಸಿಂಹಾಸನದಲ್ಲಿ ಕೂಡಿಸಲು ಅವಕಾಶವಿಲ್ಲದಂತಾಯಿತು. ಇದರಿಂದ ಅವರ ಮನಸ್ಸಿಗೆ ವ್ಯಾಕುಲವಾಯಿತು. ಆದರೂ, ಹೈದರಾಲಿಯ ಸಲಹೆಯನ್ನು ತಿರಸ್ಕರಿಸುವಂತಿರಲಿಲ್ಲ. ಅವನ ಅಭಿಪ್ರಾಯ ಸೂಕ್ತವಾಗಿಯೇ ಕಾಣುತ್ತಿತ್ತು. ಆದ್ದರಿಂದ ಅವರು ಮರುಮಾತನಾಡದೆ ಹೈದರಾಲಿಯ ಅಭಿಪ್ರಾಯವನ್ನು ಅನುಮೋದಿಸಿದರು.

ಆದರಂತೆಯೇ ಹೈದರಾಲಿಯು ನಾನಾ ಗ್ರಾಮಗಳಲ್ಲಿದ್ದ ರಾಜಬಂಧುಗಳ ಮಕ್ಕಳನ್ನೆಲ್ಲಾ ರಾಜಧಾನಿಗೆ ಕರೆಯಿಸಿದನು. ಬಂಧುಬಳಗದವರ ಚಿಕ್ಕಚಿಕ್ಕ ಮಕ್ಕಳು ಅವರ ತಾಯಿತಂದೆಗಳೊಡನೆ ಶ್ರೀರಂಗಪಟ್ಟಣಕ್ಕೆ ಬಂದು ಸೇರಿದರು. ಮರುದಿನ ಹೈದರನು ದೊಡ್ಡ ಸಭೆಯನ್ನು ಸೇರಿಸಿದನು. ಅರಸರ ಸ್ತ್ರೀಯರೂ ಲಕ್ಷ್ಮಮ್ಮಣ್ಣಿಯವರೂ ತೆರೆಯ ಹಿಂದೆ ಕುಳಿತಿದ್ದರು. ಅರಸರೆಲ್ಲ ಉಚಿತಾಸನಗಳಲ್ಲಿ ಮಂಡಿಸಿದ್ದರು. ವಿದ್ವಾಂಸರೂ, ಬ್ರಾಹ್ಮಣರೂ, ಪ್ರಮುಖರಾದ ಪೌರರೂ, ಇತರ ಸಾಮಾಜಿಕರೂ ನೆರೆದಿದ್ದರು. ಆ ಸಭಾಮಂಟಪದ ಒಂದು ಕಡೆಯಲ್ಲಿ ಬಾಲಕರಿಗೆ ಸುಖಾಸನಗಳನ್ನು ಏರ್ಪಡಿಸಿದ್ದರು. ಮತ್ತೊಂದು ಕಡೆಯಲ್ಲಿ ಮಕ್ಕಳಿಗೆ ಬೇಕಾದ ಮಣ್ಣಿನ ಬಣ್ಣಬಣ್ಣದ ಆನೆ, ಕುದುರೆ, ರಥ, ಬಸವಣ್ಣ ಮುಂತಾದ ಆಟದ ಸಾಮಾನುಗಳನ್ನೂ; ಖರ್ಜೂರ, ದ್ರಾಕ್ಷಿ, ಅಂಜೂರ, ಸೇಬು, ಮಾವು, ಕಿತ್ತಳೆ, ಬಾಳೆ ಮುಂತಾದ ಫಲಗಳನ್ನೂ; ಗುಲಾಬಿ, ಸಂಪಗೆ, ಇರವಂತಿಗೆ, ಸೇವಂತಿಗೆ, ಜಾಜಿ, ಮಲ್ಲಿಗೆ ಮುಂತಾದ ನಾನಾ ಬಗೆಯ ಹೂಗಳನ್ನೂ; ಲಾಡು, ಚಿರೋಟಿ, ಫೇಣಿ. ಕಜ್ಜಾಯ,



ಕರಿಗಡುಬು, ಚಕ್ಕುಲಿ, ಗೂರಿಗೆ ಮುಂತಾದ ಸಿಹಿ ಸಿಹಿ ಭಕ್ಷ್ಯಗಳನ್ನೂ
ಅಣಿಮಾಡಿ ಸಾಲುಸಾಲಾಗಿ ಇಟ್ಟಿದ್ದರು. ಇನ್ನೊಂದು ಸಾಲಿನಲ್ಲಿ ಕತ್ತಿ,
ಕಠಾರಿ, ಗುರಾಣಿ, ಬಂದೂಕ, ಗಂಡುಗೊಡಲಿ, ಕನ್ನಡಿ, ಬಾಕು, ತ್ರಿಶೂಲ
ಮುಂತಾದ ಆಯುಧಗಳನ್ನೂ ಜೋಡಿಸಿ ಇಟ್ಟಿದ್ದರು. ಬಾಲಕರು ಅಲ್ಲಿದ್ದ
ಪದಾರ್ಥಗಳನ್ನು ನೋಡಿ ನೋಡಿ ಹಿಗ್ಗುತ್ತಿದ್ದರು. ಅವರು ತಮಗೆ
ಬೇಕಾದ ಪದಾರ್ಥಗಳನ್ನು ತೆಗೆದುಕೊಳ್ಳಲು ಮೊದಲೇ ಮನಸ್ಸಿನಲ್ಲಿ ಯೋಚಿಸಿ
ಕೊಳ್ಳುತ್ತಿದ್ದರು.

ಹೈದರನು ಆ ಮಕ್ಕಳನ್ನು ಕುರಿತು "ನೀವು ಯಾರೂ ಭಯಪಡ
ಬೇಕಾಗಿಲ್ಲ. ನಿಮ್ಮ ಎದುರಾಗಿ ಇಟ್ಟಿರುವ ಪದಾರ್ಥಗಳಲ್ಲಿ ನಿಮಗೆ ಬೇಕಾದು
ದನ್ನು ನೀವು ಆರಿಸಿ ತೆಗೆದುಕೊಳ್ಳಬಹುದು" ಎಂದು ಹೇಳಿದನು. ಆ ಮಕ್ಕಳಲ್ಲಿ
ಯಾರೂ ಐದು ವರ್ಷಕ್ಕೆ ಹೆಚ್ಚು ವಯಸ್ಸಿನವರಿರಲಿಲ್ಲ. ಅಲ್ಲಿ ನೆರೆದಿದ್ದ ಜನರು
ಕುತೂಹಲದಿಂದ ನೋಡುತ್ತಿದ್ದರು. ಆಗ ಬಾಲಕರು ಒಬ್ಬೊಬ್ಬರಾಗಿ ಎದ್ದು
ಬಂದು ಅವರಿಗೆ ಇಷ್ಟಬಂದ ವಸ್ತುಗಳನ್ನು ತೆಗೆದುಕೊಂಡು ಹಿಂತಿರುಗುತ್ತಿದ್ದರು.
ಆ ಬಾಲಕರಲ್ಲಿ ಚಾಮರಾಜನೆಂಬ ಮೂರು ವರ್ಷದ ಕುಮಾರನು ಎದ್ದು
ಬಂದನು. ಆ ಮಗು * ಅರಿಕುಠಾರದ ದೇವರಾಜ ಅರಸಿನವರ ಮತ್ತು
ಹೊನ್ನಾಜಮ್ಮಣ್ಣಿಯವರ ಏಕಮಾತ್ರ ಪುತ್ರ. ಆ ಮಗುವಿನ ಮುಖ
ಮುದ್ದಾಗಿತ್ತು. ಆ ಮುದ್ದುಮುಖದಲ್ಲಿ ಮುಗುಳು ನಗೆಯು ನಲಿಯುತ್ತಿತ್ತು.
ಮೈಕಟ್ಟು ಅಚ್ಚುಕಟ್ಟಾಗಿತ್ತು. ಆ ಮಗು ಗಂಭೀರವಾಗಿ ನಗುನಗುತ್ತಾ
ಬಂದು ಅಲ್ಲಿದ್ದ ಕಠಾರಿಯನ್ನೂ ಕನ್ನಡಿಯನ್ನೂ ತೆಗೆದುಕೊಂಡು ಹಿಂದಿರುಗಿತು.
ಹೈದರನು ಆ ಮಗುವನ್ನು ಎತ್ತಿಕೊಂಡು ಈ ಚಾಮರಾಜರೇ ಮೈಸೂರು
ಪ್ರಭುವೆಂದು ಆ ಸಭೆಯಲ್ಲಿ ಉದ್ಘೋಷಿಸಿದನು. ಆ ಕುಮಾರನನ್ನು
ಭದ್ರಾಸನದ ಮೇಲೆ ಕೂಡಿಸಿ ಸಾಮಾಜಿಕರು ಮುಜರೆ ಮಾಡಿದರು. ಹೈದ
ರಾಲಿಯು ನಜರು ಒಪ್ಪಿಸಿ ಅಡ್ಡಬಿದ್ದನು. ಲಕ್ಷ್ಮಮ್ಮಣ್ಣಿಯವರು ಆ ಮಗು
ವನ್ನು ಶಾಸ್ತ್ರೋಕ್ತವಾಗಿ ದತ್ತುಸ್ವೀಕಾರ ಮಾಡಿಕೊಂಡರು. ಶುಭದಿನದಲ್ಲಿ
ಆ ಕುಮಾರರಿಗೆ ಪಟ್ಟಾಭಿಷೇಕವೂ ಆಯಿತು. ಇವರೇ ಖಾಸಾ ಚಾಮರಾಜ
ಒಡೆಯರು.

---

* ಅರಿಕುಠಾರಕ್ಕೆ ಈಗ ಚಾಮರಾಜನಗರ ಎಂದು ಹೆಸರಿದೆ.

ಲಕ್ಷ್ಮಮ್ಮಣ್ಣಿಯವರಿಗೆ ಇದರಿಂದ ಸಮಾಧಾನವಾಗಲಿಲ್ಲ. ಹೈದರ್ ಆಲಿಯು ತಾನೇ ಸರ್ವಾಧಿಕಾರಿಯಾಗಿರಬೇಕೆಂಬ ದುರಾಲೋಚನೆಯಿಂದ ಚಿಕ್ಕ ಮಗುವಿಗೆ ಪಟ್ಟ ಕಟ್ಟಿಸಿದನೆಂದು ಅವರು ಭಾವಿಸಿದರು. ಆಗ ಹೈದರನ ಜೊತೆಗೆ ತೋಷಿಖಾನೆ ಕೃಷ್ಣರಾಯ, ಬಚ್ಚೇರಾಯ, ಬಾದಾಮಿ ಬಿಷ್ಟೋಪಂತ, ಅಂಚೆ ಶಾಮಯ್ಯ, ಪ್ರಧಾನ ವೆಂಕಪ್ಪಯ್ಯ ಮುಂತಾದವರು ಪ್ರಮುಖ ರಾಗಿದ್ದರು. ಹೈದರನ ಮಗ ಟೀಪೂಸುಲ್ತಾನ್ ತರುಣನಾದರೂ ಕಾರ್ಯಾಸಕ್ತ ನಾಗಿದ್ದನು. ವೀರಯೋಧನಾಗಿದ್ದನು. ಹೈದರಾಲಿಯ ಆಪ್ತನೌಕರನಾಗಿದ್ದ ಪೂರ್ಣಯ್ಯ ಅರಮನೆಯ ಮನೆವಾರ್ತೆಯ ಕೆಲಸವನ್ನು ಮಾಡುತ್ತಿದ್ದನು. ರಾಜ್ಯಾಡಳಿತ ಕಾರ್ಯಗಳಲ್ಲಿ ಲಕ್ಷ್ಮಮ್ಮಣ್ಣಿಯವರ ಮಾತೇನೂ ಸಾಗುತ್ತಿರಲಿಲ್ಲ.

ಖಾಸಾ ಚಾಮರಾಜ ಒಡೆಯರು ದಿನದಿನಕ್ಕೆ ಪ್ರವರ್ಧಮಾನರಾಗು ತ್ತಿದ್ದರು. ರಾಜಯೋಗ್ಯವಾದ ವಿದ್ಯೆಗಳಲ್ಲಿ ನಿಷ್ಣಾತರಾದರು. ಲಕ್ಷ್ಮಮ್ಮಣ್ಣಿ ಯವರು ಆ ಪುಟ್ಟ ಒಡೆಯರ ಯೋಗಕ್ಷೇಮವನ್ನು ತಾಯಿಯಂತೆಯೇ ನೋಡಿ ಕೊಳ್ಳುತ್ತಿದ್ದರು. ಆದರೆ ಹೈದರನಿಗೆ ಅದು ಸಹಿಸಲಿಲ್ಲ. ಒಡೆಯರಿಗೆ ಲಕ್ಷ್ಮ ಮ್ಮಣ್ಣಿಯವರಿಂದ ಏನಾದರೂ ತೊಂದರೆಯಾದೀತೆಂದು ತಿಳಿದು ಅವರನ್ನು ಅರಮನೆಯ ನಾಟಕಶಾಲೆಯ ಬೊಕ್ಕಸದ ತೊಟ್ಟಿಯಲ್ಲಿ ವಾಸಮಾಡುವಂತೆ ಏರ್ಪಾಟು ಮಾಡಿದನು. ಅವರು ಯಾವಾಗಲೂ ಒಡೆಯರ ಹತ್ತಿರವೇ ಇದ್ದರೆ, ಸಮಯವರಿತು ಒಡೆಯರಿಗೆ ತನ್ನ ಮೇಲೆ ಏನಾದರೂ ದುರಭಿಪ್ರಾಯ ವನ್ನು ಹುಟ್ಟಿಸಬಹುದೆಂದೂ ಆಲೋಚಿಸಿದನು. ಅದರಿಂದ ಅವನು ಲಕ್ಷ್ಮ ಮ್ಮಣ್ಣಿಯವರ ಪೋಷಣೆಯಲ್ಲಿದ್ದ ಬಾಲ ಮಹಾರಾಜರನ್ನು ಇನ್ನು ಮುಂದೆ ಮಲ್ಲಾಜಮ್ಮಯ್ಯನೆಂಬ ರಾಣಿವಾಸದ ಮಹಿಳೆಯೊಬ್ಬಳು ನೋಡಿಕೊಳ್ಳುವಂತೆ ಗೊತ್ತುಮಾಡಿದನು. ಅಲ್ಲದೆ ಲಕ್ಷ್ಮಮ್ಮಣ್ಣಿಯವರು ಅರಮನೆಯ ನಾಟಕ ಶಾಲೆಯ ಬೊಕ್ಕಸದ ತೊಟ್ಟಿಯಲ್ಲಿ ವಾಸಮಾಡಿಕೊಂಡಿರಬೇಕೆಂದು ನಿರ್ಬಂಧ ಪಡಿಸಿದನು. ಇದರಿಂದ ಅವರಿಗೆ ಬಹಳ ದುಃಖವಾಯಿತು. ಮೈಸೂರು ಪ್ರಭುವನ್ನು ಲಾಲಿಸಿ ಪಾಲಿಸಿ ಆರೈಕೆ ಮಾಡುವುದಕ್ಕೂ ಅವಕಾಶವಿಲ್ಲದಂತಾ ಯಿತು. ಅವರು ಯಾರಿಗೆ ಹೇಳಿಕೊಳ್ಳಬೇಕು! ಅವರಿಗೆ ಯಾವುದೊಂದು ಸ್ವಾತಂತ್ರ್ಯವೂ ಇರಲಿಲ್ಲ. ಅವರು ಪಂಜರದ ಹಕ್ಕಿಯಂತೆ ಜೀವಿಸುತ್ತಿದ್ದರು

ಹೈದರನು ಹೆಚ್ಚು ಹೆಚ್ಚು ಸೈನ್ಯವನ್ನು ಕಟ್ಟಿ ಅನೇಕ ತುಂಟ ಪಾಳೆಯ ಗಾರರನ್ನೂ ರಾಜರನ್ನೂ ಜಯಿಸಿ ಮೈಸೂರು ರಾಜ್ಯವನ್ನು ವಿಸ್ತರಿಸುತ್ತಿದ್ದನು. ಅವನು ಎಲ್ಲ ಕೆಲಸಗಳನ್ನೂ ಒಡೆಯರ ಹೆಸರಿನಿಂದಲೇ ನಡೆಸುತ್ತಿದ್ದನು. ನವರಾತ್ರಿ ಮುಂತಾದ ಉತ್ಸವಗಳನ್ನೂ ಅರಮನೆಯಲ್ಲಿ ನಡೆಯತಕ್ಕ ಆಯ ಕಟ್ಟುಗಳನ್ನೂ ಒಂದೇ ಸಮನೆ ನಡೆಸಿಕೊಂಡು ಬರುತ್ತಿದ್ದನು. ದೇವದಾಯ, ಬ್ರಹ್ಮದಾಯ, ಸರ್ವಮಾನ್ಯ, ಭಟ್ಟಮಾನ್ಯ ಮುಂತಾದವುಗಳನ್ನು ವ್ಯವಸ್ಥೆ ಮಾಡಿದನು. ಅರಮನೆಯ ಗುರಿಕಾರರು, ಊಳಿಗದವರು, ಪರಿಚಾರಕರು, ಸಂಗೀತಗಾರರು, ವೈಣಿಕರು, ವೈದ್ಯರು, ಹೊಗಳುಭಟ್ಟರು, ಅನ್ವಯರು, ಬಂದು ಜನರು ಮುಂತಾದವರಿಗೆ ಉಂಬಳಿಗ್ರಾಮ ಭೂಮಿಗಳನ್ನೂ, ಯುದ್ಧದಲ್ಲಿ ಮಡಿದ ಯೋಧರ ಹೆಂಗಸರು ಮಕ್ಕಳಿಗೆ ರಕ್ತಕೊಡಿಗೆಗಳನ್ನೂ ಕೊಟ್ಟು ಅವರಿಗೆಲ್ಲ ರಾಜಾಶ್ರಯವನ್ನು ಕಲ್ಪಿಸಿದನು.

ಹೈದರಾಲಿಯು ಶ್ರೀರಂಗಪಟ್ಟಣದ ಕೋಟೆಯನ್ನು ಭದ್ರಪಡಿಸಿ, ಮೈಸೂರು ಕೋಟೆಗೆ ಸುತ್ತಲೂ ಕೇವಣಿಯನ್ನು ಕಟ್ಟಿಸಿ, ಮದ್ದೂರು ಚನ್ನ ಪಟ್ಟಣ ಮುಂತಾದ ಗಡಿಗಳಿಗೆ ಕೋಟೆ ಕೊತ್ತಲಗಳನ್ನು ನಿರ್ಮಿಸಿದನು. ಶ್ರೀರಂಗಪಟ್ಟದ ಸಮೀಪದಲ್ಲಿ ಷಹರ ಗಂಜಾಂ ಎಂಬ ಪೇಟೆಯನ್ನು ಕಟ್ಟಿಸಿ ಲಾಲ್‌ಬಾಗ್ ತೋಟವನ್ನು ಹಾಕಿಸಿದನು. ಬೆಂಗಳೂರಲ್ಲಿರುವ ಲಾಲ್‌ಬಾಗ್ ಉಪವನವನ್ನು ನಿರ್ಮಿಸಿದವನು ಹೈದರಾಲಿಯೇ.

ಖಾಸಾ ಚಾಮರಾಜ ಒಡೆಯರು ಹೆಸರಿಗೆ ಮಾತ್ರ ದೊರೆಗಳಾಗಿದ್ದರು. ಹೈದರಾಲಿಯು ರಾಮೇಶ್ವರದಿಂದ ಹಿಡಿದು ಕೃಷ್ಣಾನದಿಯವರೆಗೂ ಮೈಸೂರು ರಾಜ್ಯವನ್ನು ಹೆಚ್ಚಿಸಿದ್ದನು. ಐವತ್ತೊಂದು ಮಂದಿ ಪಾಳೆಯಗಾರರು ಒಡೆಯ ರಿಗೆ ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಆಗ ಸಂಸ್ಥಾನದ ಹುಟ್ಟುವಳಿ ಎರಡು ಕೋಟಿ ಮೂವತ್ತು ಲಕ್ಷ ವರಹಗಳು. ಕೆಲವು ಕಾಲದ ಮೇಲೆ ಹೈದರನಿಗೆ ಬೆನ್ನುಫಣಿ ಎದ್ದು ಆರ್ಕಾಟಿನಲ್ಲಿ ಕಾಲವಾದನು. ಆಗ ಅವನ ಸಮೀಪವಲ್ಲಿದ್ದ ಪೂರ್ಣಯ್ಯನು ಹೈದರನ ಶರೀರವನ್ನು ತೊಳೆಸಿ ತೇಗದ ಮರದ ಪೆಟ್ಟಿಗೆಯಲ್ಲಿರಿಸಿ, ದುರ್ವಾಸನೆ ಬಾರದಂತೆ ಶ್ರೀಗಂಧದ ಪುಡಿ, ಪಚ್ಚ ಕರ್ಪೂರ, ಪುನಗು ಮುಂತಾದ ಪರಿಮಳ ದ್ರವ್ಯವನ್ನು ತುಂಬಿ, ಮೊಹರು ಮಾಡಿ, ಆ ಪೆಟಿಗೆಯನ್ನು ರಹಸ್ಯವಾಗಿ ಶ್ರೀರಂಗಪಟ್ಟಣಕ್ಕೆ ಕಳುಹಿಸಿ, ಆಗ

ಕಲ್ಲಿಕೋಟೆಯಲ್ಲಿದ್ದ ಟೀಪೂಸುಲ್ತಾನನನ್ನು ಕರೆಯಿಸಿಕೊಂಡು ಅವನಿಗೆ ಎಲ್ಲ ಸಂಗತಿಗಳನ್ನೂ ತಿಳಿಸಿದರು. ಮುಂದೆ ಅವರು ಅವನು ತನ್ನ ತಂದೆಯ ಅಂತ್ಯ ಕ್ರಿಯೆಗಳನ್ನು ತೀರಿಸಿ ತಾನೇ ಸರ್ವಾಧಿಕಾರಿಯಾದನು.

ಲಕ್ಷ್ಮಮ್ಮಣ್ಣಿಯವರು ಒಳ್ಳೆಯ ದಿನಗಳನ್ನು ನಿರೀಕ್ಷಿಸುತ್ತಿದ್ದರು ಹೈದರನ ಮರಣದಿಂದ ಅವರಿಗೆ ನಿರ್ಬಂಧ ಕಡಮೆಯಾಯಿತು. ಆಗ ಖಾಸಾ ಚಾಮರಾಜ ಒಡೆಯರಿಗೆ ಏಳು ವರ್ಷ ವಯಸ್ಸು. ಲಕ್ಷ್ಮಮ್ಮಣ್ಣಿಯವರು ಒಡೆಯರಿಗೆ ರಾಜೋಚಿತ ಶಿಕ್ಷಣವನ್ನು ಕೊಡಿಸುತ್ತ ವಿದ್ಯಾಭ್ಯಾಸ ಮಾಡಿಸು ತ್ತಿದ್ದರು. ಒಡೆಯರು ಅವರ ಪೋಷಣೆಯಲ್ಲಿಯೇ ಬೆಳೆಯುತ್ತಿದ್ದರು. ಟೀಪೂ ಸುಲ್ತಾನನು ಬಹಳ ದರ್ಪದಿಂದ ಎಲ್ಲ ರಾಜಕಾರ್ಯಗಳನ್ನೂ ಸ್ವತಂತ್ರ ವಾಗಿಯೇ ನಡಸುತ್ತಿದ್ದನು.

# ಅಧ್ಯಾಯ

## ಕಾರ್ಯಸಂಧಾನ; ರಾಜನೀತಿ ನೈಪುಣ್ಯ

ಲಕ್ಷ್ಮಮ್ಮಣ್ಣಿಯವರು ಮೈಸೂರು ರಾಜವಂಶದ ಉತ್ಕರ್ಷೆಯನ್ನೇ ಸದಾ ಚಿಂತಿಸುತ್ತಿದ್ದರು. ಹೈದರಾಲಿಯ ಪ್ರಾಬಲ್ಯವನ್ನು ಮುರಿದು, ಮೈಸೂರ ರಾಜ್ಯಸೂತ್ರಗಳನ್ನು ಒಡೆಯರು ಹಿಡಿಯುವಂತೆ ಮಾಡಬೇಕೆಂದು ಹವಣಿಸು ತ್ತಿದ್ದರು. ಅರಮನೆಯನ್ನು ಬಿಟ್ಟು ಹೊರಕ್ಕೆ ಹೋಗಲು ಅವಕಾಶವಿಲ್ಲದ ಅವರು ಏನುತಾನೇ ಮಾಡಿಯಾರು! ರಾಜ್ಯದಲ್ಲಿ ಪ್ರಮುಖರಾದ ಅಧಿಕಾ ಗಳೆಲ್ಲ ಸ್ವಾರ್ಥಪರರಾಗಿದ್ದರು. ರಾಜವಂಶದ ಗೌರವವನ್ನು ಲಕ್ಷಿಸಿ ರಾ ಭಕ್ತಿಯಿಂದ ದುಡಿಯಬಲ್ಲ ದೇಶಾಭಿಮಾನಿಗಳೇ ಇರಲಿಲ್ಲ. ಇದ್ದವರೆ ಹೈದರನ ಭಯದಿಂದ ಏನುಮಾಡುವುದಕ್ಕೂ ಹಿಂಜರಿಯುತ್ತಿದ್ದರು. ಲಕ್ಷ್ ಮ್ಮಣ್ಣಿಯವರಿಗೆ ಆಗಿನ ಪರಿಸ್ಥಿತಿಯೆಲ್ಲ ಚೆನ್ನಾಗಿ ಮಂದಟ್ಟಾಗಿತ್ತು. ರಾ ವಂಶಕ್ಕೆ ಒದಗಿದ್ದ ದುಃಸ್ಥಿತಿಯಿಂದ ಪಾರಾಗಲು ಉಪಾಯವನ್ನು ಅವರು ಹುಡುಕುತ್ತಿದ್ದರು.

ಅವರು ಅದುವರೆಗೆ ಆಗಲೇ ಇಂಗ್ಲೀಷರು ಹಿಂದೂಸ್ಥಾನದಲ್ಲಿ ನೆಲಸಿ ತಮ್ಮ ಸ್ವಾಸ್ಥ್ಯಗಳನ್ನು ಭದ್ರಪಡಿಸಿಕೊಂಡಿದ್ದರು. ಮದ್ರಾಸಿನಲ್ಲಿದ್ದ ಇಂಗ್ಲೀಷ ಗವರ್ನರ್ ಎಂಬ ಅಧಿಕಾರಿಯು ಮೈಸೂರು ದೇಶದ ವಿದ್ಯಮಾನ್ಯಗಳನ್ನೆ ಕಾಲಕಾಲಕ್ಕೆ ತಿಳಿದುಕೊಂಡು ಇಂಗ್ಲೆಂಡ್ ಸರ್ಕಾರಕ್ಕೆ ವರದಿಮಾಡುತ್ತಿದ್ದನು ಆಗ ಹೈದರಾಲಿಯು ಇಂಗ್ಲೀಷರಿಗೆ ಶತ್ರುವಾಗಿದ್ದನು. ಅವನು ಇಂಗ್ಲೀಷರಿ ಸೇರಿದ್ದ ರಾಜ್ಯಗಳನ್ನು ಕೊಳ್ಳೆ ಹೊಡೆಯುತ್ತ ತನ್ನ ಸಾಹಸದಿಂದ ಅವರನು ಎದುರಿಸುತ್ತಲೇ ಇದ್ದನು. ಇಂಗ್ಲೀಷರೂ ಅವನ ಮೇಲೆ ಯುದ್ಧ ಮಾ ಕೈಸಾಗದೆ ಸುಮ್ಮನಾಗುತ್ತಿದ್ದರು. ಇಂಥ ಮಹಾ ಶತ್ರುವಿನ ಮೇಲೆ ಅವ ಯಾವಾಗಲೂ ಕಣ್ಣಿಟ್ಟದ್ದರು. ಇದು ಲಕ್ಷ್ಮಮ್ಮಣ್ಣಿಯವರಿಗೆ ಚೆನ್ನಾ ಗೊತ್ತಿತ್ತು. ಅವರು ಹೈದರನ ಹಿಡಿತದಿಂದ ರಾಜ್ಯವನ್ನು ತಪ್ಪಿಸಿ ಒಡೆಯ ಮನೆತನಕ್ಕೆ ಕೊಡಬೇಕಾದ ಇಂಗ್ಲೀಷರ ಸಹಾಯದಿಂದ ಮಾತ್ರವೇ ಸಾಧ

ವೆಂದು ತಿಳಿದರು. ಈ ದೃಷ್ಟಿಯಿಂದ ಅವರು ಭೇದೋಪಾಯವನ್ನು ಹೂಡಿದರು. ಇದು ಅವರ ರಾಜತಂತ್ರಜ್ಞತೆಯ ಹೆಗ್ಗುರುತು.

ಲಕ್ಷ್ಮಮ್ಮಣ್ಣಿಯವರು ಮದ್ರಾಸ್ ಸರ್ಕಾರದೊಂದಿಗೆ ಗೋಪ್ಯವಾಗಿ ಸಂಧಾನಮಾಡಬೇಕೆಂದು ನಿಶ್ಚಯಿಸಿದರು. ಇದೇನೂ ಸಾಮಾನ್ಯವಾದ ಪ್ರಯತ್ನವಲ್ಲ! ಆದರೇನು! ಜಾತಿಕ್ಷತ್ರಿಯ ವೀರರಮಣಿಯಲ್ಲವೆ! ಇಬ್ಬರು ಪ್ರಬಲ ಶತ್ರುಗಳಲ್ಲಿ ಭೇದೋಪಾಯವನ್ನು ಹೂಡುವುದೆಂದರೆ ಸಾಹಸದ ಮಾತು. ಹರಿವ ಗರಗಸಕ್ಕೆ ತಲೆಯೊಡ್ಡಿದಂತೆಯೇ. ತಮ್ಮ ಸಂಧಾನ ಕೈಗೂಡಿದರಂತೂ ಸರಿ; ಇಲ್ಲವಾದರೆ ಮುಂದೆ ಎಂಥ ಅಪಾಯ ಪರಿಸ್ಥಿತಿಯೊದಗುವುದೆಂಬುದನ್ನೂ ಅವರು ಊಹಿಸಿದ್ದರು. ಎಲ್ಲ ಪರಿಸ್ಥಿತಿಯನ್ನೂ ಅವರು ವಿಮರ್ಶಿಸಿ ಮದ್ರಾಸ್ ಗವರ್ನರ್‌ರವರೊಂದಿಗೆ ರಹಸ್ಯವಾಗಿ ಪತ್ರ ವ್ಯವಹಾರಮಾಡಲು ಪ್ರಯತ್ನಿಸಿದರು. ಅವರು ಆಪ್ತನೂ ಕಾರ್ಯಚತುರನೂ ಸ್ವಾಮಿ ನಿಷ್ಠನೂ ಆದ ತಿರುಮಲರಾಯನೆಂಬ ರಾಯಭಾರಿಯನ್ನು ಮದ್ರಾಸಿಗೆ ಕಳುಹಿಸಿಕೊಟ್ಟರು. ಮೈಸೂರು ರಾಜವಂಶದ ಪ್ರಾಚೀನತೆಯನ್ನೂ, ಕೀರ್ತಿ ಗೌರವಗಳನ್ನೂ ಸೂಚಿಸಿ ಅವರು ಪತ್ರ ಬರೆಯಿಸಿ ರಾಯಭಾರಿಯ ಸಂಗಡ ಕಳಿಸಿದರು. ಇಂಗ್ಲೀಷರು ಸಹಾಯಮಾಡಿ ಹೈದರನನ್ನು ನಿವಾರಿಸಿ ಮೈಸೂರು ರಾಜ್ಯವನ್ನು ಯದುವಂಶದ ಪ್ರಭುಗಳಿಗೆ ಕೊಡಿಸಬೇಕೆಂದೂ, ಈ ಪ್ರಯತ್ನಕ್ಕಾಗಿ ಬರುವ ಸೈನ್ಯದ ಖರ್ಚುವೆಚ್ಚಗಳಿಗಾಗಿ ಒಂದು ಕೋಟಿ ರೂಪಾಯಿಗಳನ್ನೂ ದರ್ಬಾರು ವೆಚ್ಚಕ್ಕಾಗಿ ಮೂರು ಲಕ್ಷ ರೂಪಾಯಿಗಳನ್ನೂ ಕೊಡುತ್ತೇನೆಂದೂ ಅವರು ಬರೆಯಿಸಿದ್ದರು. ಮದ್ರಾಸ್ ಗವರ್ನರವರಿಗೆ ಬರೆದ ಮತ್ತೊಂದು ಕಾಗದದಲ್ಲಿ "ನಾವು ತಿರುಮಲರಾಯನೆಂಬ ರಾಯಭಾರಿಯನ್ನು ನಿಮ್ಮ ಬಳಿಗೆ ಕಳಿಸಿರುತ್ತೇವೆ. ಈತನಿಗೆ ನಾವು ನಮ್ಮ ಪರವಾಗಿ ನಿಮ್ಮಲ್ಲಿ ಮಾತನಾಡಲು ಅಧಿಕಾರ ಕೊಟ್ಟಿರುತ್ತೇವೆ. ಈತನೊಡನೆ ನೀವು ಮಾಡಿಕೊಳ್ಳಬಹುದಾದ ಎಲ್ಲ ಒಡಂಬಡಿಕೆಗಳಿಗೂ ನಾವು ಬದ್ಧರಾಗಿರುತ್ತೇವೆ. ಇದಕ್ಕೆ ನಮ್ಮ ಸಂಪೂರ್ಣ ಅನುಮತಿಯುಂಟು" ಎಂದು ತಿಳಿಸಿದ್ದರು. ಯಾವ ರೀತಿಯಿಂದಲಾದರೂ ಸರಿಯೆ ಇಂಗ್ಲೀಷರ ಸಹಾಯವನ್ನು ಪಡೆದುಕೊಂಡು ಬರಬೇಕೆಂದು ಅವರು ತಿರುಮಲರಾಯನಿಗೆ ಹೇಳಿದ್ದರು.

ತಿರುಮಲರಾಯನು ಶ್ರೀರಂಗಪಟ್ಟಣದಿಂದ ಹೊರಟು ಕೆಲವು ದಿನಗಳಲ್ಲಿಯೇ ಮದ್ರಾಸಿಗೆ ಸೇರಿದನು. ಅವನು ಸಮಯವರಿತು ಅಲ್ಲಿ ಗವರ್ನರನ್ನು ಸಂದರ್ಶಿಸಿ, ಮೈಸೂರು ದೇಶದ ಪರಿಸ್ಥಿತಿಯನ್ನು ತಿಳಿಸಿದುದಲ್ಲದೆ, ಲಕ್ಷ್ಮಮ್ಮಣ್ಣಿಯವರ ಮನೋಗತವನ್ನು ಅವರಿಗೆ ಸ್ಪಷ್ಟವಾಗಿ ಹೇಳಿ ತಾನು ತೆಗೆದುಕೊಂಡು ಹೋಗಿದ್ದ ಎರಡು ಕಾಗದಗಳನ್ನೂ ಒಪ್ಪಿಸಿದನು. ಗವರ್ನರು ಎಲ್ಲ ವಿಷಯಗಳನ್ನೂ ಸಾವಧಾನವಾಗಿ ಆಲೋಚಿಸಿದರು. ಅದುವರೆಗೆ ಇಂಗ್ಲೀಷರು ಎರಡು ಸಲ ಹೈದರಾಲಿಯ ಮೇಲೆ ಯುದ್ಧಮಾಡಿ ನಿರುತ್ಸಾಹಿಗಳಾಗಿ ಹಿಂತಿರುಗಿದ್ದರು. ಹೈದರನು ಮದರಾಸ್ ಪಟ್ಟಣವನ್ನೇ ಮುತ್ತಿ ಹಿಡಿಯಲು ಪ್ರಯತ್ನ ಮಾಡಿದ್ದುದನ್ನು ಕಂಡು ಇಂಗ್ಲಿಷರು ನಡುಗಿ ಹೋಗಿದ್ದರು. ಅವರು ಹೈದರನನ್ನು ಸದೆ ಬಡಿಯಲು ಸಮಯ ಕಾಯುತ್ತಿದ್ದರು. ತಿರುಮಲರಾಯನು ಹೇಳಿದ ಮಾತುಗಳನ್ನು ಕೇಳಿ ಅವರಿಗೆ ಸಂತೋಷವಾಯಿತು. ಲಕ್ಷ್ಮಮ್ಮಣ್ಣಿಯವರೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕೆಂದು ಇಂಗ್ಲೀಷರು ನಿಶ್ಚಯಿಸಿದರು. ತಂಜಾವೂರು ರಾಜನ ಬಳಿಯಲ್ಲಿ ಆಗ ರೆಸಿಡೆಂಟರಾಗಿದ್ದ ಜಾರ್ಜ್ ಸಲಿವನ್ ಎಂಬುವರ ಬಳಿಗೆ ತಿರುಮಲರಾಯನನ್ನು ಕಳುಹಿಸಿ, ಯುಕ್ತ ಕಂಡಂತೆ ಒಪ್ಪಂದ ಮಾಡಿಕೊಳ್ಳಬೇಕೆಂದು ಏರ್ಪಾಟಾಯಿತು. ಅಷ್ಟರಲ್ಲಿಯೇ ಕಂಪೆನಿ ಸರ್ಕಾರದವರು ಮದ್ರಾಸ್ ಗವರ್ನರನ್ನು ಹಿಂದಕ್ಕೆ ಕರೆಯಿಸಿಕೊಂಡರು. ಅದರಿಂದ ಅದುವರೆಗೆ ತಿರುಮಲರಾಯನು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾದುವು. ಮುಂದೆ ಏನು ಮಾಡಬೇಕೆಂಬುದು ಅವನಿಗೆ ತೋಚಲಿಲ್ಲ. ಆದುದರಿಂದ ಅವನು ಕೆಲವು ಕಾಲ ತಂಜಾವೂರಿನಲ್ಲಿಯೇ ನಿಂತನು.

ಖಾಸಾ ಚಾಮರಾಜ ಒಡೆಯರಿಗೆ ಹನ್ನೆರಡು ವರ್ಷ ವಯಸ್ಸಾಯಿತು. ಆ ಚಿಕ್ಕ ವಯಸ್ಸಿನಲ್ಲಿಯೇ ಅವರಿಗೆ ವಿವಾಹ ಮಾಡಬೇಕೆಂದು ಲಕ್ಷ್ಮಮ್ಮಣ್ಣಿಯವರು ಆಲೋಚಿಸಿದರು. ಅಷ್ಟು ಹೊತ್ತಿಗೆ ಹೈದರಾಲಿಯು ಕಾಲವಾಗಿ ಮೂರು ವರ್ಷವಾಗಿತ್ತು. ರಾಜಬಂಧುವರ್ಗದಲ್ಲಿ ಅನುರೂಪಳಾದ ಕನ್ಯೆಯನ್ನು ತಂದು ಒಡೆಯರಿಗೆ ಮದುವೆ ಮಾಡಲು ಪ್ರಯತ್ನಗಳು ನಡೆದುವು. ಸಮುಖದ ನಂಜರಾಜಯ್ಯನ ಪುತ್ರಿ ಕೆಂಪನಂಜಮ್ಮಣ್ಣಿಯರು ಖಾಸಾ ಚಾಮರಾಜ ಒಡೆಯರ ಪಟ್ಟಮಹಿಷಿಯಾದರು. ಇವರಲ್ಲದೆ, ಒಡೆಯರಿಗೆ

ಅಮಚವಾಡಿ ನಂಜರಾಜಯ್ಯನವರ ಪುತ್ರಿ ಕೆಂಪದೇವಾಜಮ್ಮಣ್ಣಿಯವರು ದ್ವಿತೀಯ ಪತ್ನಿಯಾದರು. ಒಡೆಯರು ಅರಮನೆಯಲ್ಲಿ ನೆಮ್ಮದಿಯಾಗಿ ಕಾಲ ಕಳೆಯುತ್ತಿದ್ದರು.

ಲಕ್ಷ್ಮಮ್ಮಣ್ಣಿಯವರಿಗೆ ರಾಜ್ಯವಿಚಾರದಲ್ಲಿ ಚಿಂತೆಯಿದ್ದಿತಾದರೂ, ತಮ್ಮ ಕುಮಾರರ ಅಭ್ಯುದಯವನ್ನು ಕಂಡು ಹರ್ಷಿಸುತ್ತಿದ್ದರು. ರಾಜವಂಶವು ಶುಕ್ಲಪಕ್ಷದ ಚಂದ್ರನಂತೆ ವರ್ಧಿಸಬೇಕೆಂದು ಅವರು ಹಾರೈಸುತ್ತಿದ್ದರು. ಆದರೆ, ದೈವವಿಲಾಸವೇ ಬೇರೆಯಾಗಿದ್ದಿತು. ಕೆಲವು ಕಾಲದಮೇಲೆ ಒಡೆಯರ ದ್ವಿತೀಯ ಪತ್ನಿ ಕೆಂಪದೇವಾಜಮ್ಮಣ್ಣಿಯವರು ಗರ್ಭವತಿಯರಾದರು. ಲಕ್ಷ್ಮಮ್ಮಣ್ಣಿಯವರು ಸಂತೋಷಪಡುತ್ತಿದ್ದರು. ರಾಜಪತ್ನಿಯು ನವಮಾಸ ಕಳೆದ ಮೇಲೆ ಗಂಡುಮಗುವನ್ನು ಹೆತ್ತು ಕಾಲವಾದರು. ಮಗುವೂ ತೀರಿ ಹೋಯಿತು, ಲಕ್ಷ್ಮಮ್ಮಣ್ಣಿಯವರು ಈ ದುಃಖದಿಂದ ಕೊರಗುತ್ತಿದ್ದರು. ವಂಶಲತೆ ಪ್ರೌತು ಫಲಿಸುವಷ್ಟರಲ್ಲಿಯೇ ದುರ್ವಿಧಿಯು ಚಿವುಟಿ ಹಾಕಿತೆಂದು ಪರಿತಪಿಸಿದರು. ಒಡೆಯರೂ ದುಃಖದಿಂದ ಕುಂದಿದರು. ವಂಶಾಭಿವೃದ್ಧಿಯಾಗಬೇಕೆಂಬ ಮಹದಾಕಾಂಕ್ಷೆಯಿಂದ ಒಡೆಯರಿಗೆ ಲಕ್ಷ್ಮಮ್ಮಣ್ಣಿಯವರು ಐದು ಮಂದಿ ಕನ್ಯೆಯರನ್ನು ತಂದು ಪುನಃ ವಿವಾಹಮಾಡಿದರು. ಅರೆಪುರದ ಚಿಂಡರಾಜಯ್ಯನವರ ಪುತ್ರಿ ಚೆಲುವರಾಜಮ್ಮಣ್ಣಿಯವರು, ಹುಲ್ಲಹಳ್ಳಿ ವೀರ ರಾಜಯ್ಯನವರ ಪುತ್ರಿ ನಂಜಮ್ಮಣ್ಣಿಯವರು, ತೊಂಡವಾಡಿ ಕಾಂತರಾಜಯ್ಯನವರ ಪುತ್ರಿ ಲಕ್ಷ್ಮಮ್ಮಣ್ಣಿಯವರು, ಬೀಚನಹಳ್ಳಿ ಮಲ್ಲರಾಜಯ್ಯನವರ ಪುತ್ರಿ ದೇವೀರಮ್ಮಣ್ಣಿಯವರು ಮತ್ತು ಮೂಗೂರು ನಂಜರಾಜಯ್ಯನವರ ಪುತ್ರಿ ದೇವಾಜಮ್ಮಣ್ಣಿಯವರು–ಈ ಐದು ಜನರೂ ಒಡೆಯರ ಕೈಹಿಡಿದರು. ಅರಮನೆಯ ಅಂತಃಪುರದಲ್ಲಿ ರಾಜಪತ್ನಿಯರು ಸುಖದಿಂದ ಕಾಲ ಕಳೆಯುತ್ತಿದ್ದರು. ಒಡೆಯರ ರಾಜ ಕುಟುಂಬ ಆನಂದಮಯವಾಗಿತ್ತು. ಇದನ್ನು ನೋಡಿಕೊಂಡು ಲಕ್ಷ್ಮಮ್ಮಣ್ಣಿಯವರು ಸ್ವಲ್ಪ ಮಟ್ಟಿಗೆ ಸಂತೋಷವಾಗಿರುತ್ತಿದ್ದರು. ಆದರೂ ಅವರ ಒಡಲಲ್ಲಿ ದುಃಖ ಮರುಕಳಿಸುತ್ತಿತ್ತು. ತಮ್ಮ ಕುಮಾರ ರತ್ನಸಿಂಹಾಸನದಲ್ಲಿ ಮಂಡಿಸಿ ಸಾಮಂತರಾಜರಿಂದ ಓಲೈಸಿಕೊಳ್ಳುವುದನ್ನು ನೋಡಬೇಕೆಂಬ ಅವರ ಬಯಕೆ ಈಡೇರಲಿಲ್ಲ.

ಲಕ್ಷ್ಮಮ್ಮಣ್ಣಿಯವರು ಇಂಗ್ಲೀಷರೊಂದಿಗೆ ಸಂಧಾನ ಪ್ರಯತ್ನಗಳನ್ನು ಬಹಳ ಜಾಗರೂಕತೆಯಿಂದಲೇ ನಡಸುತ್ತಿದ್ದರು. ತಿರುಮಲರಾಯನು ತಂಜಾವೂರಿನಲ್ಲಿಯೇ ಇದ್ದುಕೊಂಡು ಅಲ್ಲಿನ ವಿದ್ಯಮಾನಗಳನ್ನೆಲ್ಲಾ ಲಕ್ಷ್ಮಮ್ಮಣ್ಣಿಯವರಿಗೆ ರಹಸ್ಯವಾಗಿ ಬರೆದು ಕಳುಹಿಸುತ್ತಿದ್ದನು. ಅವರೂ ಅವನಿಗೆ ತಕ್ಕ ಸಲಹೆಗಳನ್ನು ಬರೆದು ಕಳುಹಿಸುತ್ತ ಕಾಲಾನುಕೂಲವನ್ನು ಕಾಯುತ್ತಿದ್ದರು. ಮೈಸೂರು ರಾಜ್ಯದಲ್ಲಿ ಹೈದರನಂಥ ವೈರಿಯನ್ನು ನೋಡಿಕೊಂಡು ಸುಮ್ಮನಿರಲು ಇಂಗ್ಲೀಷರೂ ಅವಿವೇಕಿಗಳಲ್ಲ. ಅವನ ತರುವಾಯ ಬಂದ ಅವನ ಮಗ ಟೀಪೂಸುಲ್ತಾನನೂ ಅರಿಭಯಂಕರನಾಗಿಯೇ ಇದ್ದನು. ಟೀಪು ವೆಂದರೆ ಇಂಗ್ಲಿಷರಿಗೆ ಸಿಂಹಸ್ವಪ್ನವಾಗಿದ್ದಿತು. ಟೀಪುವಿನ ಔನ್ನತ್ಯವನ್ನು ಮುರಿಯಬೇಕೆಂದು ಕಂಪೆನಿ ಸರ್ಕಾರದವರೂ, ಇಂಗ್ಲೀಷಿನವರ ಪ್ರಾಬಲ್ಯವನ್ನು ಮುರಿಯಬೇಕೆಂದು ಸುಲ್ತಾನನೂ ಪರಸ್ಪರವಾಗಿ ಸ್ಪರ್ಧಿಸುತ್ತಲೇ ಇದ್ದರು. ಹೀಗೆ, ಉಭಯಪಕ್ಷದವರೂ ಸಮಯಸಂಧಾನ ಚತುರರಾಗಿ ವರ್ತಿಸುತ್ತ ಯುದ್ಧಪ್ರಯತ್ನಗಳನ್ನು ಮಾಡುತ್ತಿದ್ದರು. ಈ ಸಮಯದಲ್ಲಿ ಲಕ್ಷ್ಮಮ್ಮಣ್ಣಿಯವರು ತೆಪ್ಪಗೆ ಕುಳಿತಿರಲಿಲ್ಲ. ಇಂಗ್ಲೀಷರು ಮೈಸೂರು ರಾಜ್ಯವನ್ನು ಒಡೆಯರಿಗೆ ವಹಿಸಿಕೊಟ್ಟರೆ ತಾವು ಪ್ರತಿವರ್ಷವೂ ಕಂಪೆನಿ ಸರ್ಕಾರದವರಿಗೆ ೭೫ ಲಕ್ಷ ರೂಪಾಯಿ ಕಪ್ಪವನ್ನು ಸಲ್ಲಿಸುವುದಲ್ಲದೆ ಪ್ರತಿವರ್ಷವೂ ೧೫ ಲಕ್ಷ ರೂಪಾಯಿ ಹುಟ್ಟುವಳಿ ಬರತಕ್ಕಷ್ಟು ದೇಶವನ್ನು ಬಿಟ್ಟುಕೊಡುವುದಾಗಿಯೂ ತಮ್ಮ ಅಭಿಪ್ರಾಯವನ್ನು ಸೂಚಿಸಿ ಪತ್ರ ಬರೆದು ತಿರುಮಲರಾಯನಿಗೆ ಕಳುಹಿಸಿ ಕೊಟ್ಟರು. ಅವನು ಲಕ್ಷ್ಮಮ್ಮಣ್ಣಿಯವರ ಅಭಿಪ್ರಾಯವನ್ನು ಮದ್ರಾಸ್ ಸರ್ಕಾರದವರಿಗೆ ತಿಳಿಸಿ ಯುದ್ಧಪ್ರಯತ್ನದಲ್ಲಿ ನಿರತನಾದನು.

ರಣಶೂರನಾದ ಟೀಪುವಿನ ಮೇಲೆ ಯುದ್ಧ ಮಾಡಬೇಕಾದರೆ ಇಂಗ್ಲೀಷರು ಹಿಂದುಮುಂದು ನೋಡುತ್ತಿದ್ದರು. ಅವರು ಮರಾಟಿಯವರ ಮತ್ತು ಹೈದರಾಬಾದ್ ನಿಜಾಮನ ಸಹಾಯವನ್ನು ಪಡೆದು ಯುದ್ಧ ಸನ್ನದ್ಧ ರಾಗುತ್ತಿದ್ದರು.: ಟೀಪುವೂ ಇಂಗ್ಲೀಷರ ಶತ್ರುಗಳಾದ ಫ್ರೆಂಚರೊಂದಿಗೆ ಸ್ನೇಹ ಮಾಡಿಕೊಂಡು ಅವರ ನೆರವನ್ನು ಪಡೆಯುತ್ತಿದ್ದನು. ಹೀಗೆ ಉಭಯ ಪಕ್ಷಗಳೂ ಯುದ್ಧಾಸಕ್ತವಾಗಿದ್ದುವು. ಈ ರೀತಿ ಎಲ್ಲ ಸಿದ್ಧತೆಗಳೂ ಹದಕ್ಕೆ ಬಂದಮೇಲೆ ಇಂಗ್ಲೀಷರು ಮೈಸೂರು ದೇಶದ ಮೇಲೆ ದಂಡೆತ್ತಿ ಬಂದರು.

“ದೈವಸಹಾಯದಿಂದ ಮಾತ್ರವೇ ನಾವು ಟೀಪೂಸುಲ್ತಾನನನ್ನು ಜಯಿಸ ಬೇಕಲ್ಲದೆ ಬೇರೆ ದಾರಿಯೇ ಇಲ್ಲ. ಒಂದುವೇಳೆ ನಮಗೆ ಜಯವಾದರೆ, ಮೈಸೂರು ರಾಜ್ಯವನ್ನು ಒಡೆಯರ ವಂಶಜರಿಗೆ ವಹಿಸಿಕೊಡಲು ಸಂತೋಷ ದಿಂದ ಕಂಪೆನಿ ಸರ್ಕಾರದವರು ಒಪ್ಪಿರುತ್ತಾರೆ” ಎಂಬ ಅರ್ಥವನ್ನು ಸೂಚಿಸಿ ಮದ್ರಾಸ್ ಗವರ್ನರವರು ಲಕ್ಷ್ಮಮ್ಮಣ್ಣಿಯವರಿಗೆ ಪತ್ರ ಬರೆದಿದ್ದರು. ಅದನ್ನು ನೋಡಿ ಅವರಿಗೆ ಸಂತೋಷವಾಯಿತು. ಆದರೇನು! ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ! ಇಂಗ್ಲೀಷರು ಟೀಪುವಿನ ಮೇಲೆ ಯುದ್ಧ ಮಾಡಿದರೂ ಅವನನ್ನು ಸೋಲಿಸಲುಸಾಧ್ಯವಾಗಲಿಲ್ಲ. ಇದರಿಂದ ಲಕ್ಷ್ಮಮ್ಮಣ್ಣಿಯವರ ಆಶೆ ನಿರಾಶೆಯಾಯಿತು. ಅವರ ಪ್ರಯತ್ನಗಳಿಂದ ಪ್ರಯೋಜನವಾಗಲಿಲ್ಲ. ಇಷ್ಟಾದರೂ ಅವರು ಧೈರ್ಯಗೆಡಲಿಲ್ಲ; ಎದೆಗುಂದ ಲಿಲ್ಲ. ತಮ್ಮ ಮಹಾಪ್ರಯತ್ನಗಳನ್ನು ಮುಂದುವರಿಸುತ್ತಲೇ ಇದ್ದರು.

# ಅಧ್ಯಾಯ

## ಪುತ್ರಶೋಕ; ಶತ್ರುನಾಶ

ಖಾಸಾ ಚಾಮರಾಜ ಒಡೆಯರಿಗೆ ಬಹಳ ಕಾಲವಾದರೂ ಮಕ್ಕಳಾ
ಲಿಲ್ಲ. ಲಕ್ಷ್ಮಮ್ಮಣ್ಣಿಯರಿಗೆ ರಾಜ್ಯದ ಚಿಂತೆಗಿಂತಲೂ ಮೊಮ್ಮಕ್ಕಳನ
ಲಾಲಿಸಿ ಪಾಲಿಸಬೇಕೆಂಬ ಆಸೆ ಬಲವಾಯಿತು. ತಾವು ಹೂಡಿರುವ ಸಂಧಾ
ಪ್ರಯತ್ನಗಳು ಫಲಪ್ರದವಾದರೆ, ಆಗ ಮೈಸೂರು ರಾಜ್ಯಲಕ್ಷ್ಮಿಯ
ಹಿಡಿಯುವ ಪ್ರಭುಪುಂಗವರ ಪೀಳಿಗೆಯು ಸಿದ್ಧವಾಗಿರಬೇಕೆಂದು ಅವ
ಹಾರೈಸುತ್ತಿದ್ದರು. ಈ ಸದುದ್ದೇಶ ಸಾಫಲ್ಯಕ್ಕಾಗಿ ಅವರು ತಮ್ಮ ಕುಮಾ
ಖಾಸಾ ಚಾಮರಾಜ ಒಡೆಯರನ್ನೂ ಹಿರಿಯ ಸೊಸೆ ಪಟ್ಟಮಹಿಷಿ ಕೆಂ
ನಂಜಮ್ಮಣ್ಣಿಯರನ್ನೂ ಕರೆದುಕೊಂಡು ನಂಜನಗೂಡಿಗೆ ದೇವರ ಸೇವೆ
ಹೊರಟರು. ಅಲ್ಲಿ ಅವರು ರಾಜದಂಪತಿಗಳ ಕೈಲಿ ಅನೇಕ ಧಾನಧಮ
ಗಳನ್ನು ಮಾಡಿಸಿ ಬ್ರಾಹ್ಮಣರಿಗೂ ಜಂಗಮರಿಗೂ ಸಂತರ್ಪಣೆಗಳನ
ನಡಸುತ್ತಿದ್ದರು.

ನಂಜನಗೂಡು ಶ್ರೀರಂಗಪಟ್ಟಣಕ್ಕೆ ದಕ್ಷಿಣದಲ್ಲಿ ಎರಡು ಗಾವು
ದೂರದಲ್ಲಿದೆ. ಅಲ್ಲಿ ಕಪಿಲಾ ನದಿಯು ಪ್ರವಹಿಸುತ್ತಿದೆ. ಆ ನದಿ
ತೀರದಲ್ಲಿ ಶ್ರೀಕಂಠೇಶ್ವರಸ್ವಾಮಿಯ ದೇವಸ್ಥಾನವಿದೆ. ಆ ದೇವಸ್ಥಾನದಲ್ಲಿರು
ಶಿವಲಿಂಗವನ್ನು ಬಹಳ ಹಿಂದಿನಕಾಲದಲ್ಲಿ ಗೌತಮ ಮಹರ್ಷಿ ಪ್ರತಿ
ಮಾಡಿದನೆಂದು ಆ ಸ್ಥಳಪುರಾಣದಿಂದ ತಿಳಿದುಬರುತ್ತದೆ. ನಂಜನಗೂಡಿ
ಸಮೀಪದಲ್ಲಿ ಚೂರ್ಣಾವತಿ ಮತ್ತು ಕೌಂಡಿನ್ಯ ನದಿಗಳೂ ಹರಿಯುತ್ತಿ
ಈ ಎರಡು ನದಿಗಳೂ ಸೇರುವ ಸ್ಥಳವನ್ನು ಪರಶುರಾಮ ಕ್ಷೇತ್ರವೆಂದು ಕರೆಯ
ತ್ತಾರೆ. ತೃಣ ಜಲತರು ಸಮೃದ್ಧವಾದ ಆ ಪ್ರದೇಶವು ದೇವರ ಮಹ
ಸಾನ್ನಿಧ್ಯದಿಂದ ಪ್ರಶಾಂತವಾಗಿ ಕಾಣುತ್ತಿದೆ. ಆ ಪುಣ್ಯಕ್ಷೇತ್ರಕ್ಕೆ ಸಾವಿರಾ
ಮಂದಿ ಯಾತ್ರಾರ್ಥಿಗಳು ಬಂದುಹೋಗುತ್ತಾರೆ.

ಖಾಸಾ ಚಾಮರಾಜ ಒಡೆಯರೂ ಕೆಂಪನಂಜಮ್ಮಣ್ಣಿಯವರೂ ಸಂತಾನವನ್ನು ಪಡೆಯಬೇಕೆಂದು ಆಕಾಂಕ್ಷೆಯಿಂದ ಆ ಪುಣ್ಯಕ್ಷೇತ್ರದಲ್ಲಿ ದೇವತಾ ಕಾರ್ಯವನ್ನು ಶಾಸ್ತ್ರೋಕ್ತವಾಗಿ ನಡೆಯಿಸುತ್ತಿದ್ದರು. ಆ ಮಹಾದೇವನನ್ನು ಕುರಿತು ಕೋಟಿ ಪಂಚಾಕ್ಷರೀ ಜಪ,ತಪ, ಹೋಮ ಮುಂತಾದ ಕಾರ್ಯಗಳನ್ನು ಯಥಾವಿಧಿಯಾಗಿ ಆಚರಿಸುತ್ತಿದ್ದರು. ಆ ದಂಪತಿಗಳ ಭಕ್ತಿಪೂರ್ವಕವಾದ ಪೂಜಾಕೈಂಕರ್ಯಗಳಿಗೆ ಪರಮೇಶ್ವರನು ಸಂತುಷ್ಟನಾದನು. ಒಂದು ಮಂಡಲ ಪರ್ಯಂತ ಅವರು ಜಪಾನುಷ್ಠಾನು ಮಾಡುತ್ತಿದ್ದರು. ಕಡೆಯ ದಿನ ತೇಜಃಪುಂಜನಾದ ಒಬ್ಬ ಶಿವಯೋಗಿಯು ಆ ರಾಜದಂಪತಿಗಳಿಗೆ ಕಾಣಿಸಿಕೊಂಡು "ನೀವು ಮಾಡಿದ ಕೋಟಿ ಪಂಚಾಕ್ಷರೀ ಜಪದಿಂದ ಶ್ರೀಕಂಠೇಶ್ವರನು ಪ್ರಸನ್ನನಾದನು. ಮಹಾವಿಷ್ಣುವಿನ ಅಂಶದಿಂದ ನಿಮಗೆ ಒಬ್ಬ ಪುತ್ರನು ಜನಿಸುವನು" ಎಂದು ಹೇಳಿ ಅವರನ್ನು ಆಶೀರ್ವದಿಸಿ ಹೋದನು. ಶ್ರೀಕಂಠೇಶ್ವರನೇ ಶಿವಯೋಗಿಯ ರೂಪದಿಂದ ಬಂದಿದ್ದನೆಂದು ಭಾವಿಸಿ ಆ ದಂಪತಿಗಳು ಭಗವಂತನ ಅಪಾರಮಹಿಮೆಯನ್ನು ಮನಸಾರೆ ಸ್ತುತಿಸಿ, ಪೂಜಾಕಾರ್ಯಗಳನ್ನು ಸಾಂಗಗೊಳಿಸಿದರು. ಲಕ್ಷ್ಮಮ್ಮಣ್ಣಿಯವರು ಸೊಸೆಯ ಕೈಯಿಂದ ಮುತ್ತೈದೆಯರ ಪೂಜೆಯನ್ನು ಮಾಡಿಸಿ ಅವರಿಗೆಲ್ಲ ದಿವ್ಯ ವಸ್ತ್ರಾಭರಣಗಳನ್ನು ಅರಿಸಿನ, ಕುಂಕುಮ, ಹೂ, ಗಂಧ, ವೀಳೆಯದೊಂದಿಗೆ ಮಡಿಲು ತುಂಬಿಸಿದರು. ತರುವಾಯ ಅವರು ರಾಜಧಾನಿಗೆ ಹಿಂದಿರುಗಿ ಬಂದು ದೇವರನ್ನು ಧ್ಯಾನಿಸುತ್ತ ಸುಖವಾಗಿ ಕಾಲಯಾಪನೆ ಮಾಡುತ್ತಿದ್ದರು.

ಕೆಲವು ಕಾಲ ಕಳೆದುಹೋಯಿತು. ಪಟ್ಟಮಹಿಷಿ ಕೆಂಪನಂಜಮ್ಮಣ್ಣಿಯವರು ಶ್ರೀಕಂಠೇಶ್ವರನ ಅನುಗ್ರಹ ಬಲದಿಂದ ಗರ್ಭವತಿಯರಾದರು. ರಾಜಪತ್ನಿ ಅಂತರ್ವತ್ನಿಯೆಂಬ ಸಂಗತಿಯು ಆಪ್ತ ಸಖಿಯರ ಮೂಲಕ ಅರಮನೆಯಲ್ಲೆಲ್ಲಾ ಹಬ್ಬಿತು. ಮಹಾಮಾತೃ ಶ್ರೀ ಲಕ್ಷ್ಮಮ್ಮಣ್ಣಿಯವರಿಗಂತೂ ಅತ್ಯಾನಂದವಾಯಿತು. ಯದುವಂಶ ಕಲ್ಪತರು ಈಪ್ಸಿತಾರ್ಥವನ್ನು ನೀಡುವ ಸುಯೋಗವನ್ನು ಮನಸ್ಸಿನಲ್ಲಿ ನೆನೆನೆನೆದು ಲಕ್ಷ್ಮಮ್ಮಣ್ಣಿಯವರು ಸಂತೋಷಪಡುತ್ತಿದ್ದರು. ಮಹಾರಾಜರ ಇತರ ಪತ್ನಿಯರೂ ಸಹ ಸವತಿ ಮಾತ್ಸರ್ಯಕ್ಕೆ ಒಳಗಾಗದೆ ಕೆಂಪನಂಜಮ್ಮಣ್ಣಿಯವರನ್ನು ನಾನಾವಿಧವಾಗಿ ಉಪಚರಿಸುತ್ತಿದ್ದರು. ಅವರು ಸುಕುಮಾರ ಶುಭೋದಯವನ್ನು ಕುತೂಹಲ

ದಿಂದ ನಿರೀಕ್ಷಿಸುತ್ತಿದ್ದರು. ಅರಮನೆಯಲ್ಲಿ ನಿತ್ಯೋತ್ಸವಗಳೂ ದಾನಧರ್ಮ
ಗಳೂ ಯಥಾವಿಧಿಯಾಗಿ ನಡೆಯುತ್ತಿದ್ದುವು. ಪುಂಸವನ, ಸೀಮಂತಾ
ಶುಭಕರ್ಮಗಳು ಅಟ್ಟಹಾಸದಿಂದ ಜರುಗಿದುವು. ನವಮಾಸಗಳು ತುಂ
ಹತ್ತನೆಯ ತಿಂಗಳು ಪ್ರಾಪ್ತವಾಯಿತು. ಆನಂದ ಸಂವತ್ಸರ ಆಷಾ
ಬಹುಳ ಬಿದಿಗೆ ಸೋಮವಾರ ಶುಭಲಗ್ನದಲ್ಲಿ (ಕ್ರಿ. ಶ. ೧೭೯೪ನೆಯ ಇಸವಿ
ಕೆಂಪನಂಜಮ್ಮಣ್ಣಿಯವರು ಗಂಡುಮಗುವನ್ನು ಪಡೆದರು. ದೇವಕೀದೇವಿಯ
ಪುಣ್ಯಗರ್ಭದಲ್ಲಿ ಶ್ರೀಕೃಷ್ಣನು ಅವತರಿಸಿದಂತೆ ಕೆಂಪನಂಜಮ್ಮಣ್ಣಿಯವ
ಗರ್ಭಸುಧಾಂಬುಧಿಯಲ್ಲಿ ಸಂತಾನ ಕೌಸ್ತುಭ ಆವಿರ್ಭವಿಸಿತು.

ಮಹಾರಾಜರಿಗೆ ಪುತ್ರೋತ್ಸವವಾಯಿತೆಂಬ ಸಮಾಚಾರವನ್ನು ಟೀಪು
ಸುಲ್ತಾನನಿಗೆ ಹೇಳಿ ಕಳುಹಿಸಿದರು. ಆಗ ಸುಲ್ತಾನನ ಆಜ್ಞೆಯಂತೆ ಸಂಪ್ರ
ದಾಯಾನುಸಾರವಾಗಿ ಕೋಟೆಯ ಬತೇರಿಯಿಂದ ಗೌರವಸೂಚಕವಾ
ಫಿರಂಗಿಗಳನ್ನು ಹಾರಿಸಿದರು. ಬಂಡಿಗಳಲ್ಲಿ ಸಕ್ಕರೆಯನ್ನು ತುಂಬಿ ರಾ
ಧಾನಿಯ ಬೀದಿಬೀದಿಗಳಲ್ಲಿ ಹಂಚಿದರು. ಜನ್ಮಪತ್ರಿಕೆಯನ್ನು ರಾಜವೈಭ
ದಿಂದ ನಗರದಲ್ಲೆಲ್ಲಾ ಮೆರವಣಿಗೆ ಮಾಡಿಸಿದರು. ಮಗುವಿಗೆ ಹನ್ನೆರಡನೆಯ
ದಿನದಲ್ಲಿ ನಾಮಕರಣ ಮಹೋತ್ಸವವೂ ನೆರವೇರಿತು. ನಂಜುಂಡೇಶ್ವರ
ಅನುಗ್ರಹದಿಂದ ಜನಿಸಿದ ಶಿಶುವಿಗೆ ನಂಜರಾಜ ಒಡೆಯರು ಎಂಬುದಾಗಿ ಹೆ
ರಿಟ್ಟರು. ಇವರೇ ಮುಂದೆ ಮುಮ್ಮಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರ
ಎಂಬ ಹೆಸರಿನಿಂದ ಪ್ರಖ್ಯಾತರಾದರು.

ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ಯದುಸಂತಾನವನ್ನು ನೋ
ನೋಡಿ, ಆನಂದಪಡುತ್ತಿದ್ದರು; ವಂಶಾಭ್ಯುದಯಕ್ಕಾಗಿ ಕುಮಾರನನ
ಕರುಣಿಸಿದ ಪರಮೇಶ್ವರನನ್ನು ಕೊಂಡಾಡುತ್ತಿದ್ದರು. ಸುಖದುಃಖಗಳ
ಹಗಲಿರುಳುಗಳಂತೆ ಒಂದಾದಮೇಲೊಂದು ಬಂದುಹೋಗುವುವ
ಅದರಂತೆಯೇ ಅರಮನೆಯಲ್ಲಿ ಎಲ್ಲರೂ ಸಂತೋಷದಿಂದಿರುವಾಗ ಕೆಂಪನಂ
ಮ್ಮಣ್ಣಿಯವರು ಪುತ್ರನನ್ನು ನೋಡಿ ಆನಂದಿಸುವ ಸುಯೋಗವು ಬಹಳ ದಿ
ಗಳಿರಲಿಲ್ಲ. ಕುಮಾರನನ್ನು ಪಡೆದ ಒಂದು ತಿಂಗಳೊಳಗಾಗಿಯೇ ಬಾಣಂತಿ
ದೇಹಾಲಸ್ಯವುಂಟಾಯಿತು. ವಿಧಿಯ ಸಂಕಲ್ಪವೇ ಬೇರೆಯಾಗಿದ್ದುದರಿಂ
ಕೆಂಪನಂಜಮ್ಮಣ್ಣಿಯವರು ಇಹಲೋಕವನ್ನು ತ್ಯಜಿಸಿದರು. ಇಂತ

ಅನಿರೀಕ್ಷಿತ ಘಟನೆಯಿಂದ ರಾಜಕುಟುಂಬಕ್ಕೂ ಮಹಾರಾಜರಿಗೂ ಮಹತ್ತಾದ ವ್ಯಸನ ಪ್ರಾಪ್ತವಾಯಿತು. ಲಕ್ಷ್ಮಮ್ಮಣ್ಣಿಯವರು ದುಃಖವನ್ನು ನುಂಗಿ ಕೊಂಡು ಆ ಎಳೆಯ ಕಂದನನ್ನು ಬಹಳ ಎಚ್ಚರಿಕೆಯಿಂದ ಕಾಪಾಡುತ್ತಿದ್ದರು. ಒಡೆಯರ ಇತರ ಪತ್ನಿಯರೂ ಹಸುಳೆಯ ಪೋಷಣೆಯಲ್ಲಿ ನಿರತರಾಗಿದ್ದರು, ದಿನದಿನಕ್ಕೆ ಪ್ರವರ್ಧಮಾನನಾಗುತ್ತಿದ್ದ ಕುಮಾರನ ಬಾಲಲೀಲಾ ವಿನೋದ ಗಳನ್ನು ನೋಡಿಕೊಂಡು ಪಿತಾಮಹಿಯು ಕಾಲ ಕಳೆಯುತ್ತಿದ್ದಳು. ಮಹಾ ರಾಜರು ಪತ್ನೀವಿಯೋಗ ದುಃಖವನ್ನು ಮರೆಯುತ್ತಿದ್ದರು.

ಇಂಗ್ಲೀಷರ ಸಹಾಯವಿಲ್ಲದೆ ರಾಜ್ಯವು ತಮ್ಮ ವಂಶೀಯರಿಗೆ ಬರಲಾರ ದೆಂದು ಲಕ್ಷ್ಮಮ್ಮಣ್ಣಿಯವರು ಖಚಿತವಾಗಿ ತಿಳಿದಿದ್ದರು. ಟೀಪು ತನ್ನ ತಂದೆ ಯಂತೆ ಕಾರ್ಯಚತುರನಾಗಿರಲಿಲ್ಲ. ಅವನು ಜನರಿಗೆ ಕಿರುಕುಳ ಕೊಡು ತ್ತಿದ್ದುದರಿಂದ ಅನೇಕರು ಅವನನ್ನು ಒಳಗೊಳಗೇ ದ್ವೇಷಿಸುತ್ತಿದ್ದರು. ಅಂಚೆ ಶಾಮಯ್ಯನೆಂಬ ಅಧಿಕಾರಿಯು ಲಕ್ಷ್ಮಮ್ಮಣ್ಣಿಯವರಿಗೆ ಸಹಾಯಕನಾಗಿ ತಿರುಮಲರಾಯನಿಗೆ ಕಾಗದಪತ್ರಗಳನ್ನು ಸಾಗಿಸುತ್ತಿದ್ದನು. ಟೀಪುವಿಗೆ ಇಂಗ್ಲೀಷರೇ ಅಲ್ಲದೆ ಮರಾಟಿಯವರೂ ಪ್ರಬಲ ಶತ್ರುಗಳಾಗಿದ್ದರು. ಅವನು ಫ್ರೆಂಚರೊಡನೆ ಸ್ನೇಹಮಾಡಿದ್ದುದರಿಂದ ಇಂಗ್ಲೀಷರು ಮತ್ತಷ್ಟು ಹೆದರಿದರು. ಕೊನೆಗೆ ಇಂಗ್ಲೀಷರಿಗೂ ಟೀಪುವಿಗೂ ಯುದ್ಧ ಕೈಗಟ್ಟಿತು.

ಲಕ್ಷ್ಮಮ್ಮಣ್ಣಿಯವರು ದೇವರ ದಯೆಯಿಂದ ಸಂತಾನಫಲವನ್ನು ಪಡೆದ ರಾದರೂ ರಾಜ್ಯಲಾಭವಾಗಲಿಲ್ಲವೆಂದು ವ್ಯಥೆಪಡುತ್ತಿದ್ದರು. ಮೊಮ್ಮಗನಿಗೆ ನಾಲ್ಕು ವರ್ಷ ವಯಸ್ಸಾಯಿತು. ಖಾಸಾ ಚಾಮರಾಜ ಒಡೆಯರು ಅನಿರೀ ಕ್ಷಿತವಾಗಿ ಸ್ವರ್ಗಸ್ಥರಾದರು. ಲಕ್ಷ್ಮಮ್ಮಣ್ಣಿಯವರ ನಿರೀಕ್ಷೆ ಬಯಲಾಯಿತು ಹುಣ್ಣಿನಮೇಲೆ ಬೊಕ್ಕೆ ಎದ್ದಂತಾಯಿತು. ತಾನೊಂದು ನೆನೆದರೆ ದೈವ ವೊಂದು ನೆನೆಯಿತು. ಎಂಬಂತೆ ಆ ವೃದ್ಧಮಾತೆ ಗೋಳಾಡುತ್ತಾ ಕಗ್ಗತ್ತಲೆ ಯಲ್ಲಿ ದಾರಿತಪ್ಪಿದವರಂತೆ ಪರಿತಪಿಸುತ್ತಿದ್ದರು. ಅವರ ತಲೆಯಮೇಲೆ ಆಕಾಶವೇ ಕಳಚಿಬಿದ್ದಂತಾಯಿತು. ಅಂಥ ದಾರುಣ ಪರಿಸ್ಥಿತಿಯಲ್ಲಿಯೂ ಲಕ್ಷ್ಮಮ್ಮಣ್ಣಿಯವರು ಧೈರ್ಯಗೆಡಲಿಲ್ಲ. ತಮ್ಮ ಮೊಮ್ಮಗನಿಗೆ ರಾಜ್ಯಾಭಿ ಷೇಕಮಾಡಿಸಬೇಕೆಂದು ಸರ್ವಪ್ರಯತ್ನಗಳನ್ನೂ ಸಮಯವರಿತು ನಡೆಸುತ್ತಲೇ ಇದ್ದರು.

ಇಂಗ್ಲೀಷರಿಗೂ ಟೀಪ್ರುವಿಗೂ ನಡೆದ ಯುದ್ಧದಲ್ಲಿ ಮೈಸೂರು ಸೈ
ಸೋತುಹೋಯಿತು ; ಟೀಪ್ರೂಸುಲ್ತಾನನು ಮಡಿದು ಬಿದ್ದನು. ಇದರಿಂ
ಲಕ್ಷ್ಮಮ್ಮಣ್ಣಿಯವರ ಅಭೀಷ್ಟ ನೆರವೇರುವಂತಾಯಿತು. ಯುದ್ಧವು ಮುಗಿ
ಮೇಲೆ ಇಂಗ್ಲೀಷರು ರಾಜ್ಯವಿಭಾಗ ಮಾಡಿಕೊಳ್ಳುವುದಕ್ಕಾಗಿ ಒಂ
'ಕಮಿಷನ್' ನೇಮಕಮಾಡಿದರು. ಅವರು ಟೀಪುವಿನ ರಾಜ್ಯವನ್ನು ನಾಲ
ಪಾಲು ಮಾಡಿ ಒಂದು ಪಾಲನ್ನು ಟೀಪ್ರುವಿನ ಮಗನಾದ ಪತ್ತೇ ಹೈದರನಿ
ಕೊಡಬೇಕೆಂದು ಅಭಿಪ್ರಾಯಪಟ್ಟರು. ಆದರೆ ಆಗಿನ ಗವರ್ನರ್ ಜನರಲ
ರವರಾಗಿದ್ದ ಲಾರ್ಡ್ ಮಾರ್ನಿಂಗ್‌ಟನ್‌ರವರು ಅದನ್ನು ಒಪ್ಪದೆ ಟೀಪ್ರುವಿ
ವಂಶಜರಿಗೆ ರಾಜ್ಯವನ್ನು ಕೊಟ್ಟರೆ ಮುಂದೆ ಇಂಗ್ಲೀಷರಿಗೆ ಅಪಾಯ ಸಂಭವಿ
ಬಹುದೆಂದು ಯೋಚಿಸಿ ಮೈಸೂರು ದೇಶದ ಆರ್ಷೇಯ ರಾಜವಂಶಕ್ಕೆ ಸೇ
ದವರಾದ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರಿಗೆ ರಾಜ್ಯವನ್ನು ಕೊಟ
ಮೈಸೂರು ಸಂಸ್ಥಾನವನ್ನು ಪುನಃ ಸ್ಥಾಪಿಸಬೇಕೆಂದು ತೀರ್ಮಾನಿಸಿದರು
ಟೀಪ್ರುವಿನ ಕುಟುಂಬದವರಿಗೆ ೨,೪೦,೦೦೦ ವರಹಗಳನ್ನು ಜೀವನಾಂಶರೂ
ವಾಗಿ ಕೊಡುವಂತೆಯೂ ಏರ್ಪಾಟುಮಾಡಿದರು.

ತರುವಾಯ ಜನರಲ್ ಹ್ಯಾರಿಸ್‌ರವರೂ ಮತ್ತು ಕರ್ನಲ್ ವೆಲ್ಲೆ
ಯವರೂ ಲಕ್ಷ್ಮಮ್ಮಣ್ಣಿಯವರ ಮತ್ತು ರಾಜಕುಮಾರರ ಸಂದರ್ಶನಕ್ಕಾ
ಅರಮನೆಗೆ ಬಂದರು. ರಾಜಕುಮಾರರ ಸೋದರಮಾವನಾದ ನಂದಿರಾ
ಯ್ಯನೂ ಮತ್ತು ಹಿಂದೆ ಹೈದರಾಲಿಯ ಕೈಕೆಳಗೂ ಅನಂತರ ಟೀಪ್ರೂ ಸುಲ್ತಾ
ನನ ದೌಲತ್ತಿನಲ್ಲಿಯೂ ಅಧಿಕಾರಿಯಾಗಿದ್ದ ಪೂರ್ಣಯ್ಯನವರೂ ಇಂಗ್ಲೀಷ
ಸರದಾರರುಗಳನ್ನು ಅರಮನೆಯಲ್ಲಿ ಗೌರವಪೂರ್ವಕವಾಗಿ ಬರಮಾ
ಕೊಂಡರು. ಆಗ ಐದು ವರ್ಷ ವಯಸ್ಸಿನವರಾಗಿದ್ದ ಮುಮ್ಮಡಿ ಶ್ರೀಕೃಷ್ಣ
ರಾಜ ಒಡೆಯರು ಅರಮನೆಯಲ್ಲಿ ರಾಜಯೋಗ್ಯವಾದ ಪೀಠದಲ್ಲಿ ಮಂಡಿಸಿದ್ದರ
ಲಕ್ಷ್ಮಮ್ಮಣ್ಣಿಯವರು ತೆರೆಮರೆಯಲ್ಲಿ ಅಂತಃಪುರದ ಸ್ತ್ರೀಯರೊಂದಿಗೆ ಕು
ತಿದ್ದರು. ರಾಜಪೀಠದಲ್ಲಿ ಕುಳಿತಿದ್ದ ರಾಜಕುಮಾರರು ತೇಜಃಪುಂಜರಾ
ತೋರುತ್ತಿದ್ದರು. ಅವರ ಮುಖದಲ್ಲಿ ರಾಜಶ್ರೀಯಿಯೂ ಗಾಂಭೀರ್ಯವ
ಕಾಣುತ್ತಿದ್ದುವು. ಪ್ರಸನ್ನವದನರಾಗಿ ಕುಳಿತಿದ್ದ ಅವರು ಇಂಗ್ಲಿಷ್ ಸರದಾರ
ಬಂದೊಡನೆಯೇ ದಿಗ್ಭ್ರಮೆಗೊಂಡರು ; ಅವರ ಮುಖ ನಸುಗೆಂಪೇರಿ ಸ್ವ

ಭಯಚಕಿತರಾದಂತೆ ಕಂಡರು. ಆದರೂ ಮರುಕ್ಷಣವಲ್ಲಿಯೇ ದಿಟ್ಟತನದಿಂದ ಮಂದಹಾಸಯುಕ್ತರಾಗಿ ಸರದಾರರನ್ನು ಕುತೂಹಲ ದೃಷ್ಟಿಯಿಂದ ಈಕ್ಷಿಸುತ್ತಿದ್ದರು. ಆ ಸರದಾರರು ತಮ್ಮ ಪದ್ಧತಿಯ ಮೇರೆಗೆ ಪುಟ್ಟ ಮಹಾರಾಜರಿಗೆ ಅಭಿವಂದಿಸಿ ತಮಗಾಗಿ ಸಿದ್ಧಪಡಿಸಿದ್ದ ಉಚಿತಾಸನಗಳಲ್ಲಿ ಕುಳಿತುಕೊಂಡರು.

ಜನರಲ್ ಹ್ಯಾರಿಸ್‌ರವರು ತೆರೆಯ ಹಿಂದೆ ಕುಳಿತಿದ್ದ ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರನ್ನು ಕುರಿತು "ನಿಮ್ಮ ವಂಶದವರು ಬಹಳ ಹಿಂದಿನಿಂದಲೂ ಮೈಸೂರು ಪ್ರಭುಗಳಾಗಿ ದೊರೆತನವನ್ನು ಮಾಡಿದ್ದಾರೆ. ನಿಮಗೆ ಒದಗಿದ್ದ ಕಷ್ಟಪರಂಪರೆಗಳೆನ್ನೆಲ್ಲಾ ಕಂಪೆನಿ ಸರ್ಕಾರದವರು ತಿಳಿದುಕೊಂಡಿರುತ್ತಾರೆ. ಇನ್ನು ನೀವು ಚಿಂತಿಸಬೇಕಾಗಿಲ್ಲ. ದೇವರ ದಯೆಯಿಂದ ನಿಮ್ಮ ಮನೋರಥ ಈಡೇರುವುದು. ನಿಮ್ಮ ವಂಶದ ಈ ಕುಮಾರರು ಪ್ರಭುವಾಗಿ ರಾಜ್ಯಪರಿಪಾಲನೆ ಮಾಡುವ ಸುಯೋಗವು ಲಭಿಸುವುದು" ಎಂದು ಉರ್ದು ಭಾಷೆಯಲ್ಲಿ ತಿಳಿಸಿದರು. ಆಗ ಲಕ್ಷ್ಮಮ್ಮಣ್ಣಿಯವರು—"ನಮ್ಮನ್ನೂ ನಮ್ಮ ವಂಶದವರನ್ನೂ ದುಃಖಕೂಪದಿಂದ ಉದ್ಧರಿಸಿ ಪುನಃ ರಾಜ್ಯದಲ್ಲಿ ನೆಲೆಗೊಳಿಸಿದುದಕ್ಕಾಗಿ ನಾವು ಕಂಪೆನಿ ಸರ್ಕಾರದವರಿಗೆ ಯಾವಜ್ಜೀವವೂ ಕೃತಜ್ಞರಾಗಿರುವೆವು" ಎಂಬುದಾಗಿ ಅರಮನೆಯ ಸ್ತ್ರೀಯರ ಮೂಲಕ ಆ ಸರದಾರರಿಗೆ ಉರ್ದು ಭಾಷೆಯಲ್ಲಿ ಶ್ರುತಪಡಿಸಿದರು. ಅನಂತರ ಅವರಿಗೆ ಉಚಿತವಾದ ಮರ್ಯಾದೆ ಮಾಡಿ ಬೀಳ್ಕೊಟ್ಟರು.

ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ತಮ್ಮ ಹಿಂದಿನ ದುಃಖಗಳನ್ನೆಲ್ಲ ಮರೆಯುತ್ತ ಬಂದರು. ಚಿಕ್ಕ ವಯಸ್ಸಿನಲ್ಲಿಯೇ ಅವರಿಗೆ ಪತಿವಿಯೋಗ ದುಃಖ ಒದಗಿತು ; ಸುಲ್ತಾನರ ಆಳಿಕೆಯಲ್ಲಿ ಹಗಲಿರುಳೂ ವ್ಯಥೆಪಟ್ಟರು ; ತಮ್ಮ ಪತಿಯ ತರುವಾಯ ಪಟ್ಟಕ್ಕೆ ಬಂದ ಇಬ್ಬರು ಪ್ರಭುಗಳೂ ಬಹಳಕಾಲ ರಾಜ್ಯವಾಳಲಿಲ್ಲ : ಅವರು ಚಿಕ್ಕ ವಯಸ್ಸಿನಲ್ಲಿಯೇ ಕಾಲವಾಗಿದ್ದರು ; ಆಮೇಲೆ ದತ್ತಪುತ್ರ ಖಾಸಾ ಚಾಮರಾಜ ಒಡೆಯರ ಪತ್ನಿಯೂ ಮಗವೂ ವಿಧಿವಶರಾದರು ; ತರುವಾಯ ಒಡೆಯರೇ ಅಪಮೃತ್ಯುವಿಗೆ ತುತ್ತಾದರು. ಇದೆಲ್ಲಕ್ಕಿಂತಲೂ ಮಿಗಿಲಾಗಿ ಅವರು ಕಷ್ಟಜೀವನವನ್ನು ನಿರ್ಬಂಧದಲ್ಲಿ ಕಳೆದರು—ಹೀಗೆ ಅವರ ಆಯುಸ್ಸು ದುಃಖದಲ್ಲಿ ಕಳೆಯಿತು. ರಾಜತಂತ್ರ ವಿಶಾರದೆಯು

ರಾದ ಲಕ್ಷ್ಮಮ್ಮಣ್ಣಿಯವರು ಬಹು ಧೈರ್ಯದಿಂದ ಇಂಗ್ಲೀಷರೊಂದಿಗೆ
ಸಂಧಾನ ಪ್ರಯತ್ನಗಳನ್ನು ಮಾಡಿ ಕೊನೆಗೆ ತಮ್ಮ ಉದ್ದೇಶವನ್ನು ಸಾಧಿ
ಸಿದರು. ಮೈಸೂರು ರಾಜಮನೆತದವನ್ನು ಸಂಸ್ಥಾಪಿಸಿದರು. ಅವರು ರಾಜ
ಸ್ತ್ರೀಯಂತೆ ಅರಮನೆಯ ಅಂತಃಪುರದಲ್ಲಿಯೇ ಕುಳಿತು, ತಮಗೆ ಬಂದ ದುಃಖ
ಗಳನ್ನೆಲ್ಲ ನುಂಗಿಕೊಂಡು, ಕಾಲ ಕಳೆದಿದ್ದರೆ, ಮೈಸೂರು ರಾಜ್ಯ ಎಂದೆಂದಿಗೂ
ರಾಜವಂಶದವರಿಗೆ ತಪ್ಪಿಹೋಗಬಹುದಾಗಿತ್ತು. ಎಂಥ ವಿಷಮ ಸನ್ನಿವೇಶ
ಗಳಲ್ಲಿಯೂ ಅವರು ಧೈರ್ಯಗೆಟ್ಟವರಲ್ಲ; ತಾಳ್ಮೆ ತಪ್ಪಿದವರಲ್ಲ. ಪ್ರಶಾಂತ
ಮನಸ್ಸಿನಿಂದ ಎಲ್ಲ ಎಡರು ತೊಡರುಗಳನ್ನೂ ದಾಟಿ ಕೊನೆಗೆ ರಾಜ್ಯಾಭ್ಯುದಯ
ವನ್ನು ಸಾಧಿಸಿದರು. ತಮ್ಮ ಸಂತಾನ ಮುಮ್ಮಡಿ ಶ್ರೀಕೃಷ್ಣರಾಜ ಒಡೆ
ಯರಿಗೆ ಮೈಸೂರು ರಾಜಸಿಂಹಾಸನವನ್ನು ಗಳಿಸಿಕೊಟ್ಟರು.

# ಅಧ್ಯಾಯ ೭

## ಭಾಗ್ಯೋದಯ ; ಭಾಗ್ಯಲಕ್ಷ್ಮೀ

ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರ ರಾಜ್ಯಾಭಿಷೇಕ ಸಮಾರಂಭವು ೧೭೯೯ನೆಯ ಇಸವಿ ಜೂನ್ ೩೦ನೆಯ ತಾರೀಖಿನ ದಿನ ಮೈಸೂರು ನಗರದಲ್ಲಿ ನಡೆಯುತಕ್ಕದೆಂದು ಗೊತ್ತಾಯಿತು. ಲಕ್ಷ್ಮಮ್ಮಣ್ಣಿಯವರು ತಮ್ಮ ಮೊಮ್ಮಗನೊಂದಿಗೆ ಮೂರುದಿನ ಮುಂಚಿತವಾಗಿಯೇ ಶ್ರೀರಂಗಪಟ್ಟಣವನ್ನು ಬಿಟ್ಟು ಮೈಸೂರಿಗೆ ಬಂದು ಸೇರಿದರು. ರಾಜವರ್ಗದ ಬಂಧುಗಳೂ, ಅನೇಕ ಪಾಳೆಯಗಾರರೂ ಪಟ್ಟಾಭಿಷೇಕದ ಕಾಲಕ್ಕೆ ಬಂದು ಸೇರುತ್ತಿದ್ದರು. ಲಕ್ಷ್ಮಮ್ಮಣ್ಣಿಯವರು ನಜರಬಾದ್ ಅರಮನೆಯಲ್ಲಿ ಬಿಡಾರ ಮಾಡಿದರು. ಜನರಲ್ ಹ್ಯಾರಿಸ್‌ರವರೂ, ಅನೇಕ ಮಂದಿ ಇಂಗ್ಲೀಷ್ ಸರದಾರರುಗಳೂ ಮೈಸೂರಿಗೆ ಬಂದು ತಮ್ಮ ತಮ್ಮ ಬಿಡಾರಗಳಲ್ಲಿ ಇಳಿದಿದ್ದರು. ಪೂರ್ಣಯ್ಯನವರು ಹ್ಯಾರಿಸ್ ಸಾಹೇಬರ ಅಭಿಮತದಂತೆ ಶ್ರೀ ಲಕ್ಷ್ಮೀರಮಣಸ್ವಾಮಿಯ ದೇವಸ್ಥಾನದ ಮುಂಗಡೆಯಲ್ಲಿ ಅಭಿಷೇಕಮಂಟಪವನ್ನು ಕಟ್ಟಿಸಿ, ರಾಜವೈಭವೋಚಿತವಾಗಿ ಅಲಂಕಾರ ಮಾಡಿಸಿದರು. ಪಟ್ಟಾಭಿಷೇಕಕ್ಕೆ ಬೇಕಾದ ಸಕಲ ಸಾಮುಗ್ರಿಗಳನ್ನೂ ಸಜ್ಜುಗೊಳಿಸಿ ಅತಿಥಿಗಳಿಗೂ, ಆಗಂತುಕರಿಗೂ, ಪ್ರೇಕ್ಷಕರಿಗೂ ಉಚಿತಾಸನಗಳನ್ನು ಸಿದ್ಧಪಡಿಸಿದರು. ನಗರ ಶೃಂಗಾರ ಕಣ್ಮನಗಳನ್ನು ಸೆಳೆಯುತ್ತಿತ್ತು.

ಪಟ್ಟಾಭಿಷೇಕದ ಹಿಂದಿನ ದಿನ, ಅರಮನೆಯಲ್ಲಿ ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ರಾಜಕುಮಾರನಿಗೆ ಮಂಗಳಸ್ನಾನವನ್ನು ಮಾಡಿಸಿ, ಅರಮನೆಯ ಸಂಪ್ರದಾಯಕ್ಕನುಸಾರವಾಗಿ ಶ್ರೀ ಚಾಮುಂಡೇಶ್ವರೀ ದೇವಿಗೂ ನಂಜನಗೂಡು ಶ್ರೀಕಂಠೇಶ್ವರಸ್ವಾಮಿಗೂ ಕಾಣಿಕೆ ಕಪ್ಪಗಳನ್ನು ಕಟ್ಟಿಸಿ, ಅಂತಃಪುರದಲ್ಲಿ ನಡೆಸುತಕ್ಕ ರಾಜೋಪಚಾರ ಸೇವೆಗಳನ್ನು ನೆರವೇರಿಸಿದರು. ಪಟ್ಟಾಭಿಷೇಕದ ದಿನ ರಾಜಕುಮಾರನನ್ನು ಆನೆಯಮೇಲೆ ಚಿನ್ನದ ಅಂಬಾರಿ

ಯಲ್ಲಿ ಕುಳ್ಳಿರಿಸಿಕೊಂಡು, ಪಟ್ಟದ ಕತ್ತಿಯನ್ನೂ, ಶಿಖಾಸರವನ್ನೂ ಪಲ್ಲಕ್ಕಿ ಯಲ್ಲಿರಿಸಿಕೊಂಡು ಮಂಗಳವಾದ್ಯಗಳು ಮೊಳಗುತ್ತಿರಲು ಅತ್ಯಂತ ವೈಭವ ದೊಡನೆ ನಜರಬಾದ್ ಅರಮನೆಯಿಂದ ಹೊರಟು ಪಟ್ಟಾಭಿಷೇಕದ ಮಂಟಪಕ್ಕೆ ಬಂದರು. ಅಲ್ಲಿ ರಾಜಕುಮಾರರನ್ನು ಪೂರ್ಣಯ್ಯನವರು ಅಂಬಾರಿಯಿಂದ ಇಳಿಸಿಕೊಂಡು ಭದ್ರಾಸನದಲ್ಲಿ ಕುಳ್ಳಿರಿಸಿದರು. ಮಂಗಳವಾದ್ಯಗಳು ಮೊಳಗುತ್ತಿದ್ದವು. ಆಗ ಜನರಲ್ ಹ್ಯಾರಿಸ್‌ರವರೂ ಹೈದರಾಬಾದಿನ ಮೀರ್ ಆಲಂರವರೂ, ಮರ್ಯಾದೆಯಿಂದ ಪ್ರಭುಗಳಿಗೆ ವಂದಿಸಿ ಇಬ್ಬರೂ ಮಹಾರಾಜರ ಕೈಹಿಡಿದು, ಸಿಂಹಾಸನದಮೇಲೆ ಕುಳ್ಳಿರಿಸಿದರು. ರಾಜಪುರೋಹಿತರೂ, ವೇದವಿದರಾದ ಬ್ರಾಹ್ಮಣರೂ ಯಥಾಶಾಸ್ತ್ರವಾಗಿ ಪಟ್ಟಾಭಿಷೇಕ ಮಹೋತ್ಸವ ವನ್ನು ನಡೆಯಿಸಿದರು. ಮಹಾರಾಜರ ಗೌರವಸೂಚನಾರ್ಥವಾಗಿ ಫಿರಂಗಿಗಳು ಕೋಟೆಯ ಬತೇರಿಯಿಂದ ಹಾರಿದುವು. ನೆರೆದಿದ್ದ ಪ್ರೇಕ್ಷಕರೆಲ್ಲರೂ ಲಾಜ ಪುಷ್ಪಗಳನ್ನು ಸಮರ್ಪಿಸಿದರು. ಉತ್ತಮ ಲಕ್ಷಣಗಳಿಂದ ಕೂಡಿದ ಒಂದು ಆನೆಗೂ ಮತ್ತು ಒಂದು ಕುದುರೆಗೂ ಅದೇ ಶುಭಲಗ್ನದಲ್ಲಿ ಪಟ್ಟಾಭಿಷೇಕಮಾಡಿ ಆನೆಗೆ ಹಂಸರಾಜನೆಂಬುದಾಗಿಯೂ, ಕುದುರೆಗೆ ಜಯರಾಮನೆಂಬುದಾಗಿಯೂ ಹೆಸರಿಟ್ಟರು. ಜನರಲ್ ಹ್ಯಾರಿಸ್‌ರವರು ಪ್ರಭುಗಳಿಗೆ ರತ್ನಾಭಿಷೇಕವನ್ನು ಮಾಡಿ ವಂಶಪಾರಂಪರ್ಯವಾಗಿ ಬಂದಿದ್ದ ಶಿಖಾಸರವನ್ನೂ, ಪಟ್ಟದ ಕತ್ತಿಯನ್ನೂ ಒಪ್ಪಿಸಿ "ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರು" ಎಂಬುದಾಗಿ ಪಟ್ಟಾಭಿಷೇಕ ಸಮಯದಲ್ಲಿ ನೂತನ ನಾಮಧೇಯವನ್ನು ಮಾಡಿದರು. ಎಲ್ಲರೂ ತಮ್ಮ ತಮ್ಮ ಗೌರವಕ್ಕನುಗುಣವಾಗಿ ನಜರು ಮುಜರೆಗಳನ್ನು ಅರ್ಪಿಸಿದರು.

ಪಟ್ಟಾಭಿಷೇಕ ಮಹೋತ್ಸವವು ಪರಿಸಮಾಪ್ತಿಯಾಗುವುದಕ್ಕೆ ಮೊದಲು ಜನರಲ್ ಹ್ಯಾರಿಸ್‌ರವರು ಸಭೆಯಲ್ಲಿ ಪೂರ್ಣಯ್ಯನವರನ್ನು ಉದ್ದೇಶಿಸಿ "ನಾವು ಈಗ ಮೈಸೂರು ಸಂಸ್ಥಾನದ ಪ್ರಭುಗಳ ಸನ್ನಿಧಿಯಲ್ಲಿ ನಿಮಗೆ ಮಂತ್ರಿಪದವಿಯನ್ನು ಕೊಡಿಸಬೇಕೆಂದು ಇಚ್ಛಿಸಿದ್ದೇವೆ. ನೀವು ಇಂದಿನಿಂದ ಸಮಸ್ತ ರಾಜ್ಯಕಾರ್ಯಗಳಲ್ಲಿಯೂ ಜಾಗರೂಕರಾಗಿ ವರ್ತಿಸುತ್ತ ಪ್ರಭುಗಳ ಹಿತವನ್ನು ಕೋರುತ್ತಿರಬೇಕು. ಪ್ರಭುಗಳು ಪ್ರಾಪ್ತವಯಸ್ಕರಾಗಿ ರಾಜ್ಯ ಭಾರವನ್ನು ತಾವೇ ವಹಿಸಿಕೊಳ್ಳುವವರೆಗೂ ನೀವು ಈ ಸಂಸ್ಥಾನದ ಮರ್ಯಾ ದೆಗೆ ಕುಂದಕಬಾರದಂತೆ ಎಲ್ಲ ಕಾರ್ಯಗಳನ್ನೂ ಲಕ್ಷ್ಮಮ್ಮಣ್ಣಿಯವರ ಅನು

ಮತಿಯಂತೆ ನಡೆಯಿಸಿಕೊಂಡು ಬರಬೇಕು. ಒಡೆಯರು ಪ್ರಬುದ್ಧರಾದಮೇಲೆ ಅವರ ಆಜ್ಞಾನುಸಾರವಾಗಿ ನಡೆದುಕೊಳ್ಳುತ್ತಿರಬೇಕು. ನೀವು ಅನ್ಯಥಾ ವರ್ತಿಸಿದರೆ ಸ್ವಾಮಿದ್ರೋಹ ಮಾಡಿದ ಶಿಕ್ಷೆಗೆ ಒಳಗಾಗಬೇಕಾಗುತ್ತದೆ. ಈ ದಿನದಿಂದ ನೀವು ಮೈಸೂರು ಸಂಸ್ಥಾನದ ದಿವಾನರವರಾಗಿರುತ್ತೀರಿ" ಎಂದು ಉದ್ಘೋಷಿಸಿ, ಪೂರ್ಣಯ್ಯನವರಿಗೆ ಮಂತ್ರಿಪದವಿಯ ಸನ್ನದನ್ನು ಮಹಾರಾಜರ ಕೈಯಿಂದ ಕೊಡಿಸಿದರು. ಹೀಗೆಯೇ ಇತರ ಮುಖ್ಯ ಮುಖ್ಯ ಅಧಿಕಾರ ಸ್ಥಾನಗಳಿಗೆ ಯೋಗ್ಯರಾದ ಮತ್ತು ಸಮರ್ಥರಾದ ಜನರನ್ನು ನೇಮಕ ಮಾಡಿದರು. ಲೆಫ್ಟಿನೆಂಟ್ ಕರ್ನಲ್ ಕ್ಲೋಸ್ ಎಂಬುವರು ಆಗ ಮೈಸೂರು ಸಂಸ್ಥಾನದ ರೆಸಿಡೆಂಟರಾದರು. ಪಟ್ಟಾಭಿಷೇಕ ಮಹೋತ್ಸವವು ಸಾಂಗವಾಗಿ ನಡೆದಮೇಲೆ, ಮಹಾರಾಜರು ಅಶ್ವಾರೂಢರಾಗಿ ಸಕಲ ಸೇನಾ ಪರಿವಾರದೊಡನೆ ಅರಮನೆಗೆ ಅಟ್ಟಹಾಸದಿಂದ ತೆರಳಿದರು.

ಪಟ್ಟಾಭಿಷೇಕ ಮಹೋತ್ಸವವು ನಡೆದ ಕೆಲವು ದಿನಗಳ ತರುವಾಯ ಕಂಪೆನಿ ಸರ್ಕಾರದವರಿಗೂ ಮತ್ತು ಮಹಾರಾಜರಾದ ಮುಮ್ಮಡಿ ಶ್ರೀ ಕೃಷ್ಣ ರಾಜಒಡೆಯರಿಗೂ ಒಂದು ತಹನಾಮೆಯು ನಡೆಯಿತು. ಅದಕ್ಕೆ ಶ್ರೀರಂಗ ಪಟ್ಟಣದ ತಹನಾಮೆ ಎಂದು ಹೆಸರು. ಮಹಾರಾಜರು ಆಗ ಇನ್ನೂ ಚಿಕ್ಕ ವಯಸ್ಸಿನವರಾಗಿದ್ದುದರಿಂದ ಅವರ ಪರವಾಗಿ ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿ ಯವರೂ ಮತ್ತು ದಿವಾನ್ ಪೂರ್ಣಯ್ಯನವರೂ ಆ ತಹನಾಮೆಗೆ ರುಜು ಹಾಕಿದರು. ಸುಮಾರು ನಾಲ್ವತ್ತು ವರ್ಷಗಳ ಕಾಲ ತಮ್ಮ ವಂಶದವರ ಕೈಬಿಟ್ಟು ಹೋಗಿದ್ದ ರಾಜ್ಯವು ಪುನಃ ಮೈಸೂರು ಪ್ರಭುವಂಶಕ್ಕೆ ಲಭಿಸಿದುದಕ್ಕಾಗಿ ಲಕ್ಷ್ಮಮ್ಮಣ್ಣಿಯವರು ಅತ್ಯಾನಂದಪಟ್ಟರು.

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರಿಗೆ ಆಗ ವಹಿಸಿಕೊಟ್ಟ ಮೈಸೂರು ಸಂಸ್ಥಾನದಿಂದ ಪ್ರತಿವರ್ಷವೂ ಸುಮಾರು ಇಪ್ಪತ್ತೈದು ಲಕ್ಷ ವರಹಗಳಷ್ಟು ಉತ್ಪತ್ತಿಯು ಬರುತ್ತಿತ್ತು. ನಿಜಾಮನ ಮತ್ತು ಮರಾಟಿಯವರ ರಾಜ್ಯಗಳಿಗೆ ತೆಂಕಲು ಭಾಗದಲ್ಲಿರುವ ಬಲವಾದ ಗಿರಿದುರ್ಗಗಳ ಪಙ್ಕ್ತಿಯೇ ಮೈಸೂರು ಸಂಸ್ಥಾನದ ಬಡಗಲು ಮೇರೆಯಾಗಿ, ಪೂರ್ವದಿಕ್ಕಿಗೆ ಪುಂಗನೂರಿನಿಂದ ಹಿಡಿದು ಪಡುವಲ ಕಡೆಗೆ ಬಿದನೂರುವರೆಗೂ ವ್ಯಾಪಿಸಿ, ಉಳಿದ ಕಡೆಗಳಲ್ಲಿ ಕಂಪೆನಿ ರಾಜ್ಯಗಳೇ ಎಲ್ಲೆಯಾಗಿದ್ದ ನಾಡು ಮಹಾರಾಜರ ಪಾಲಿಗೆ ಬಂತು. ಮೈಸೂರು

ದೇಶದ ರಕ್ಷಣೆಗಾಗಿ ಕಂಪೆನಿ ಸರ್ಕಾರದವರು ಶ್ರೀರಂಗಪಟ್ಟಣದಲ್ಲಿ ತಮ
ಫೌಜನ್ನು ಇರಿಸಿದರು. ಆಗ ಗವರ್ನರ್ ಜನರಲ್‌ರವರಾಗಿದ್ದ ಲಾಡ್
ವೆಲ್ಲೆಸ್ಲಿಯವರ ಸಹೋದರ ಕರ್ನಲ್ ಆರ್ಥರ್ ವೆಲ್ಲೆಸ್ಲಿಯವರು ಸೇನ
ನಾಯಕರಾಗಿದ್ದರು. ಮುಂದೆ ಎರಡು ಮೂರು ವರ್ಷಗಳ ತರುವಾ
ಮಾಯಕೊಂಡ, ಹರಿಹರ ಮತ್ತು ಹೊಳಲ್ಕೆರೆ ಪ್ರಾಂತಗಳನ್ನು ಮೈಸೂರ
ಸಂಸ್ಥಾನಕ್ಕೆ ಸೇರಿಸಿ, ಮೈಸೂರಿಗೆ ಸೇರಿದ್ದ ಬೂದಿಕೋಟೆ ಮತ್ತು ಇತ
ಕೆಲವು ಪ್ರಾಂತಗಳನ್ನು ಕಂಪೆನಿ ರಾಜ್ಯಕ್ಕೆ ಸೇರಿಸಿಕೊಂಡರು.

ಮಹಾರಾಜರಿಗೆ ಐದು ವರ್ಷ ವಯಸ್ಸಾದಮೇಲೆ ಮಹಾಮಾತೃಶ್ರೀ
ಲಕ್ಷ್ಮಮ್ಮಣ್ಣಿಯವರು ಶುಭ ದಿನದಲ್ಲಿ ಓನಾಮಪೂಜೆಯನ್ನು ನೆರವೇರಿ
ಅವರಿಗೆ ಅಕ್ಷರಾಭ್ಯಾಸವನ್ನು ಪ್ರಾರಂಭಿಸಿದರು. ಯೋಗ್ಯರೂ, ದಕ್ಷರೂ
ನೀತಿವಂತರೂ ಮತ್ತು ಉತ್ತಮ ವಂಶೀಯರೂ ಆದ ಉಪಾಧ್ಯಾಯರನ
ನೇಮಿಸಿ, ಮಹಾರಾಜರಿಗೆ ಪಾಠಪ್ರವಚನಗಳು ಸರಿಯಾಗಿ ನಡೆಯುಂ
ಏರ್ಪಾಟು ಮಾಡಿದರು. ಮಹಾರಾಜರನ್ನು ಸುಶಿಕ್ಷಿತರನ್ನಾಗಿ ಮಾಡಲ
ತಕ್ಕ ಪ್ರಯತ್ನಗಳನ್ನು ಲಕ್ಷ್ಮಮ್ಮಣ್ಣಿಯವರು ಬಹಳ ಎಚ್ಚರಿಕೆಯಿಂದ ಮಾಡ
ತ್ತಿದ್ದರು. ರಾಜಕುಮಾರರು ದಿನದಿನಕ್ಕೆ ಪ್ರವರ್ಧಮಾನರಾಗುತ್ತ ಹೇ
ಕೊಟ್ಟ ಪಾಠಗಳನ್ನೆಲ್ಲ ಬಹಳ ಜಾಣ್ಮೆಯಿಂದ ಗ್ರಹಿಸುತ್ತ ತಮ್ಮ ಪ್ರತಿಭೆಯನ್
ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ವ್ಯಕ್ತಪಡಿಸುತ್ತಿದ್ದರು. ಅವರ ಅಸಾಧಾರ
ವಾದ ಪ್ರಜ್ಞೆ, ಅನುಪಮವಾದ ಬುದ್ಧಿಶಕ್ತಿ, ಅಸದೃಶವಾದ ಶ್ರದ್ಧಾಸಕ್ತಿ-
ಮುಂತಾದ ಗುಣಗಳನ್ನು ಕಂಡು ಮಹಾಮಾತೃಶ್ರೀಯರು ಹರ್ಷಿಸುತ್ತಿದ್ದರು
ಅವರು ಆಗಾಗ ಪುಟ್ಟಮಹಾರಾಜರಿಂದ ರಾಮಾಯಣ ಕಥೆಯನ್ನಾಗಲಿ
ಮಹಾಭಾರತ ಕಥೆಯನ್ನಾಗಲಿ ಹೇಳಿಸಿ, ಕೇಳಿ ಆನಂದ ಪಡುತ್ತಿದ್ದರು.

ಲಕ್ಷ್ಮಮ್ಮಣ್ಣಿಯವರು ಮಹಾರಾಜರಿಗೆ ಸಂಸ್ಕೃತ ವಿದ್ಯಾಭ್ಯಾಸವನ್
ಮಾಡಿಸಲು ದಕ್ಷರಾದ ಬ್ರಾಹ್ಮಣ ಪಂಡಿತರನ್ನು ನೇಮಕಮಾಡಿದರು. ಸಂಗೀ
ದಲ್ಲಿ ಒಡೆಯರಿಗೆ ಅಭಿರುಚಿಯಿದ್ದಂತೆಯೇ ಸಾಹಿತ್ಯದಲ್ಲಿಯೂ ಮಮತೆ ಇತ್ತು
ರಾಜರಿಗೆ ಅತ್ಯಾವಶ್ಯಕವಾದ ರಾಜನೀತಿಶಾಸ್ತ್ರ, ಅರ್ಥಶಾಸ್ತ್ರ, ಧರ್ಮಶಾಸ
ಮತ್ತು ಪೌರನೀತಿಶಾಸ್ತ್ರ-ಇವುಗಳಲ್ಲಿ ಅವರು ನಿಷ್ಣಾತರಾದರು. ಮರಾ
ಮತ್ತು ಉರ್ದು ಭಾಷೆಗಳಲ್ಲಿಯೂ ಅವರು ಪಾಂಡಿತ್ಯವನ್ನು ಗಳಿಸಿದರು

ಅವರಿಗೆ ತಮಿಳು ಭಾಷೆ ಚೆನ್ನಾಗಿ ಬರುತ್ತಿತ್ತು. ಅವರು ಜ್ಯೋತಿಷ್ಯ ಮತ್ತು ಗಣಿತ ವಿದ್ಯೆಗಳಲ್ಲಿ ವಿಶಿಷ್ಟ ಜ್ಞಾನವನ್ನು ಸಂಪಾದಿಸಿದರು. ಗಜಾರೋಹಣ, ಅಶ್ವಾರೋಹಣ, ಮಲ್ಲಯುದ್ಧ, ಕತ್ತಿವರಸೆ–ಮುಂತಾದ ಕ್ಷತ್ರಿಯ ಯೋಗ್ಯವಾದ ವಿದ್ಯೆಗಳಲ್ಲಿಯೂ ಅವರು ಬಹಳ ಗಟ್ಟಿಗರೆನ್ನಿಸಿಕೊಂಡರು.

ಬೆಳೆಯುವ ಪೈರು ಮೊಳಕೆಯಲ್ಲಿಯೇ ಗೊತ್ತಾಗುತ್ತದೆ. ಮುಂದೆ ಮಹಾ ಸಂಸ್ಥಾನದ ಕಾರ್ಯವನ್ನು ನಿರ್ವಹಿಸಬೇಕಾಗಿರುವ ಮಹಾರಾಜರಿಗೆ ಲಕ್ಷ್ಮಮ್ಮಣ್ಣಿಯವರು ವಿದ್ಯಾಭ್ಯಾಸ ಮಾಡಿಸಿ, ಆ ಪದವಿಗೆ ತಕ್ಕ ದಕ್ಷರನ್ನಾಗಿ ಮಾಡುತ್ತಿದ್ದರು. ಸುಂದರಮೂರ್ತಿಯಾಗಬೇಕಾದರೆ ಅಮೃತಶಿಲೆಗಾದರೂ ಸಂಸ್ಕಾರ ಬೇಕು. ಅದರಂತೆಯೇ ಉತ್ತಮ ರಾಜವಂಶದಲ್ಲಿ ಜನಿಸಿದರೂ ಒಡೆಯರಿಗೆ ಲಕ್ಷ್ಮಮ್ಮಣ್ಣಿಯವರು ಯುಕ್ತ ಶಿಕ್ಷಣವನ್ನು ಕೊಡಿಸಿ ಒಡೆಯರ ಜೀವನ ಪ್ರತಿಮೆಯನ್ನು ರೂಪುಗೊಳಿಸಿದರು. ಅದರಿಂದಲೇ ಆ ಮೂರ್ತಿಯ ಕೀರ್ತಿ ಭೂವಿಶಾಲವಾಗಿ ಹಬ್ಬಿತು. ಹೂವಿಗೆ ಸೌಂದರ್ಯವನ್ನು ಕೊಡುವ ಬೀಜ ಮಣ್ಣಿನಲ್ಲಿ ನಿಂತು, ಮಳೆಯಿಂದ ನೆನೆದು, ಬಿಸಿಲಿನ ಬೇಗೆಗೆ ಸಿಕ್ಕಿ ವಿಕಾಸವಾಗಬೇಕು. ಲಕ್ಷ್ಮಮ್ಮಣ್ಣಿಯವರು ಮಹಾರಾಜರ ನಡೆ. ನುಡಿಗಳನ್ನು ತಿದ್ದಿ, ಕಾಲೋಚಿತ ತಿಳಿವಳಿಕೆಯನ್ನು ಕೊಡುತ್ತ ಅವರನ್ನು ಪ್ರಬುದ್ಧರನ್ನಾಗಿ ಮಾಡುತ್ತಿದ್ದರು. ಒಡೆಯರಿಗೆ ಹನ್ನೊಂದು ವರ್ಷ ವಯಸ್ಸು. ಆಗ ಲಾರ್ಡ್ ವೆರ್ಲೆಷಿಯಾ ಎಂಬ ಶ್ರೀಮಂತರು ಲಂಡನ್ ನಗರದಿಂದ ಮೈಸೂರಿಗೆ ದೇಶ ಪರ್ಯಟನಕ್ಕಾಗಿ ಬಂದಿದ್ದರು. ಅವರು ಮಹಾರಾಜರನ್ನು ಅರಮನೆಯಲ್ಲಿ ಭೇಟಿಮಾಡಿ ಅವರೊಂದಿಗೆ ನಡಸಿದ ಸಂಭಾಷಣೆಯನ್ನು ಬರೆದಿಟ್ಟಿದ್ದಾರೆ. "ನಾನು ಮಹಾರಾಜರನ್ನು ಕುರಿತು ಮೈಸೂರು ನಗರದ ವಿಷಯವಾಗಿಯೂ ಮತ್ತು ರಾಜ್ಯಾಡಳಿತ ಕಾರ್ಯಗಳಿಗೆ ಸಂಬಂಧಪಟ್ಟ ಇತರ ಅನೇಕ ಸಂಗತಿಗಳ ವಿಷಯವಾಗಿಯೂ ಕೇಳಿದ ಪ್ರಶ್ನೆಗಳಿಗೆಲ್ಲಾ ಅವರು ಸ್ವಲ್ಪವೂ ತಡವರಿಸದೆ ಸದುತ್ತರಗಳನ್ನು ಹೇಳಿದರು. ಅವರು ಹಸನ್ಮುಖಿಗಳಾಗಿದ್ದರು. ಅವರ ಮುಖದಲ್ಲಿ ಗಾಂಭೀರ್ಯ ತುಂಬಿದ್ದಿತು. ಅವರಿಗೆ ಕುದುರೆ ಸವಾರಿ ಮಾಡುವುದರಲ್ಲಿಯೂ ವ್ಯಾಯಾಮ ಮಾಡುವುದರಲ್ಲಿಯೂ ಹೆಚ್ಚು ಆಸಕ್ತಿಯಿದ್ದಿತೆಂದು ಗೊತ್ತಾಯಿತು. ಅವರು ಇಂಗ್ಲೀಷ್ ಭಾಷೆಯನ್ನು ಕಲಿಯುವುದು ಅತ್ಯಾವಶ್ಯಕವೆಂದು ಹೇಳಿದೆನು. ಅವರಿಗೆ ನನ್ನ ಪ್ರೀತಿಯ ಸವಿ ನೆನಪಾಗಿರುವಂತೆ

ಒಂದು ರಣ ಖಡ್ಗವನ್ನು ಕೊಟ್ಟು ಅದನ್ನು ಪರಿಗ್ರಹಿಸಬೇಕೆಂದು ಕೇಳಿದೆನು. ಅವರು ಅದನ್ನು ಸಂತೋಷದಿಂದ ಸ್ವೀಕರಿಸಿದರು. ಮತ್ತು ಅದನ್ನು ಯಾವಾಗಲೂ ತಮ್ಮ ಸಮೀಪದಲ್ಲಿಯೇ ಇಟ್ಟುಕೊಂಡಿರುವುದಾಗಿ ತಿಳಿಸಿದರು. ಕ್ಷತ್ರಿಯರಾದ ತಮಗೆ ಅದು ಒಂದು ಯೋಗ್ಯವಾದ ಭೂಷಣವೆಂದು ಹೇಳಿ. ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ, ನನಗೆ ಅನರ್ಘ್ಯವಾದ ಒಂದು ರತ್ನ ಹಾರವನ್ನು ಕೊಟ್ಟು ಸತ್ಕರಿಸಿದರು" ಎಂದು ಆ ಶ್ರೀಮಂತರು ಹೇಳಿದ್ದಾರೆ. ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಮಹಾರಾಜರು ತಮ್ಮ ಪ್ರಭು ಪದವಿಗೆ ತಕ್ಕ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದುದು ಲಕ್ಷ್ಮಮ್ಮಣ್ಣಿಯವರ ಶಿಕ್ಷಣ ಪ್ರಭಾವ !

ಮಹಾರಾಜರಿಗೆ ಹನ್ನೊಂದು ವರ್ಷವಾಯಿತು. ಲಕ್ಷ್ಮಮ್ಮಣ್ಣಿಯವರು ಒಡೆಯರನ್ನು ತಮ್ಮ ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ಅವರ ಶ್ರೇಯೋಭಿ ವೃದ್ಧಿಗಾಗಿ ಸದಾ ದೇವರನ್ನು ಧ್ಯಾನಿಸುತ್ತಿದ್ದರು. ಮಹಾರಾಜರಿಗೂ ದೇವರಲ್ಲಿ ಅತ್ಯಂತ ಭಕ್ತಿಯಿದ್ದಿತು. ಗುರುಹಿರಿಯರಲ್ಲಿ ಪೂಜ್ಯಭಾವವನ್ನಿಟ್ಟದ್ದರು. ದೇವರೂ ಸಹ ಮಹಾರಾಜರಿಂದ ಪೂಜೆಯನ್ನು ಕೈಗೊಳ್ಳಲು ತವಕಪಡು ತ್ತಿದ್ದನು. ಮಹಾರಾಜರ ಭಕ್ತಿಯೆಂದರೆ ಅಂಥದು! ಅವರಿಗೆ ಪಟ್ಟಾಭಿಷೇಕ ವಾಗಿ ಆರು ವರ್ಷವಾಗಿತ್ತು. ಅವರು ನಂಜನಗೂಡು ಶ್ರೀಕಂಠೇಶ್ವರನ ಅನುಗ್ರಹದಿಂದ ಜನಿಸಿದವರಾದುದರಿಂದ. ಲಕ್ಷ್ಮಮ್ಮಣ್ಣಿಯವರು ಅವರನ್ನು ಕರೆದುಕೊಂಡು ದೇವರ ದರ್ಶನಕ್ಕೆ ಹೋಗಿಬರಬೇಕೆಂದು ಆಲೋಚಿಸಿದರು. ದೇವತಾ ಕಾರ್ಯಗಳಿಗೆ ಬೇಕಾದ ಎಲ್ಲ ಸಿದ್ಧತೆಗಳೂ ಜರುಗಿದುವು. ಗೊತ್ತಾದ ಶುಭ ದಿನದಲ್ಲಿ ಮಹಾರಾಜರು ಆನೆಯಮೇಲೆ ಮಂಡಿಸಿ, ನಂಜನಗೂಡಿಗೆ ಪ್ರಯಾಣ ಬೆಳಸಿದರು. ಅವರ ಜೊತೆಯಲ್ಲಿ ಲಕ್ಷ್ಮಮ್ಮಣ್ಣಿಯವರೂ ಅರಮನೆಯ ಸ್ತ್ರೀಯರೂ ಮತ್ತು ಪೂರ್ಣಯ್ಯನವರೇ ಮುಂತಾದ ಇತರ ಪರಿವಾರದ ಜನರೂ ಇದ್ದರು. ಯಾತ್ರಾರ್ಥಿಗಳಾಗಿ ಹೊರಟ ಪ್ರಭುಗಳೂ ಸಕಲ ಪರಿವಾರವೂ ನಂಜನಗೂಡಿಗೆ ಸೇರಿದಮೇಲೆ ಅವರ ಮೆರವಣಿಗೆಯು ವೈಭವದಿಂದ ನಂಜನಗೂಡು ಅರಮನೆಯ ಬಾಗಿಲಿಗೆ ಬಂತು. ಇನ್ನೇನು ದೊರೆಗಳು ಆನೆಯಿಂದ ಇಳಿಯಬೇಕೆನ್ನುವಷ್ಟರಲ್ಲಿಯೇ ಆನೆಯು ಇದ್ದಕ್ಕಿದ್ದ ಹಾಗೆ ರೇಗಿ ಕಪಿಲಾ ನದಿಯ ಕಡೆಗೆ ಓಡಲಾರಂಭಿಸಿತು. ಮಾವುತನು

ಎಷ್ಟೆಷ್ಟು ಸಾಹಸಪಟ್ಟರೂ ಆ ರೇಗಿದ ಆನೆ ಅವನ ಹತೋಟಿಗೆ ಬರಲಿಲ್ಲ. ಏನು ಅನರ್ಥವಾಗುವುದೋ ಎಂದು ದಿವಾನ್ ಪೂರ್ಣಯ್ಯನವರು ಭಯ ಭ್ರಾಂತರಾದರು. ಈ ವರ್ತಮಾನವು ಅಂತಃಪುರಕ್ಕೂ ತಿಳಿಯಿತು. ಆಗ ಮಹಾಮಾತೃಶ್ರೀಯವರು ಗಾಬರಿಯಾದರು ; ದಿಕ್ಕುತೋಚದೆ ನಿಂತುಬಿಟ್ಟರು. ಪುಣ್ಯವತಿಯರಾದ ಲಕ್ಷ್ಮಮ್ಮಣ್ಣಿಯವರು ಬಹುಭಕ್ತಿಯಿಂದ ನಂಜುಂಡೇಶ್ವರ ನನ್ನು ಪ್ರಾರ್ಥಿಸಿ ಮಾಸಲು ಕಟ್ಟಿಕೊಂಡು "ದೇವರೇ, ಪರಮಾತ್ಮಾ! ಆ ರೇಗಿದ ಆನೆಗೆ ಒಳ್ಳೆಯ ಬುದ್ಧಿಯನ್ನು ಕೊಟ್ಟು ಮಹಾರಾಜರಿಗೆ ಯಾವು ದೊಂದು ಅಪಾಯವೂ ಸಂಭವಿಸದಂತೆ ಕಾಪಾಡು. ನೀನೇ ಶರಣ್ಯನು" ಎಂದು ಶ್ರೀಕಂಠೇಶ್ವರನನ್ನು ಪ್ರಾರ್ಥಿಸಿದರು. ಸ್ವಲ್ಪ ಹೊತ್ತಿನಲ್ಲಿಯೇ ಆನೆಯು ದೇವರ ಪ್ರೇರಣೆಯಿಂದ ಗಂಭೀರವಾಗಿ ತನ್ನಷ್ಟಕ್ಕೆ ತಾನೇ ಅರಮನೆಯ ಬಾಗಿಲಿಗೆ ಬಂದು ನಿಂತಿತು. ಎಲ್ಲರಿಗೂ ಆಶ್ಚರ್ಯವಾಯಿತು! ತರುವಾಯ ಒಡೆಯರು ಆನೆಯಿಂದ ಇಳಿದು, ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ದೇವ ಸ್ಥಾನಕ್ಕೆ ದಯಮಾಡಿಸಿ ಪೂಜಾಕಾರ್ಯಗಳನ್ನು ಸಾಂಗವಾಗಿ ನೆರವೇರಿಸಿದರು. ಮಹಾರಾಜರಿಗೆ ಒದಗಿದ್ದ ಗಂಡಾಂತರವು ಭಗವದನುಗ್ರಹದಿಂದ ನಿವಾರಣೆ ಯಾಯಿತು! ಕೆಲವು ದಿನಗಳ ತರುವಾಯ ಅವರು ಪರಿವಾರದೊಡನೆ ರಾಜಧಾನಿಗೆ ಹಿಂದಿರುಗಿದರು. ಮಹಾಮಾತೃಶ್ರೀಯವರು ಮೊಮ್ಮಗನ ಶ್ರೇಯಸ್ಸಾಧನೆಗಾಗಿ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿಕೊಂಡು, ಅಲ್ಲಿ ವಿಶೇಷ ಪೂಜಾಕಾರ್ಯಗಳು ನೆರವೇರುವಂತೆ ಮಾಡಿ ಭಕ್ತಿಯಿಂದ ಸೇವೆ ಮಾಡು ತ್ತಿದ್ದರು. ಅವರು ಯದುಗಿರಿ, ಕರಿಯಘಟ್ಟ, ಸುಬ್ರಹ್ಮಣ್ಯ, ತಿರುಮಕೂಡಲು, ಮಡುಕುತೊರೆ, ತಲಕಾಡು, ಶ್ರೀರಂಗಪಟ್ಟಣ, ನಂಜನಗೂಡು, ಗರ್ಗೇಶ್ವರಿ, ಮೂಗೂರು ಮುಂತಾದ ಪುಣ್ಯಸ್ಥಳಗಳಿಗೆ ಮಹಾರಾಜರೊಂದಿಗೆ ಹೋಗಿ ದೇವರ ದರ್ಶನದಿಂದ ಆನಂದಪಡುತ್ತಿದ್ದರು. ಒಡೆಯರು ಮೈಸೂರು ನಾಡಿನ ಭಾಗ್ಯಸೂರ್ಯನಂತೆ ಪ್ರವರ್ಧಮಾನರಾಗುತ್ತಿದ್ದರು ; ಮಹಾಮಾತೃಶ್ರೀ ಯವರು ಭಾಗ್ಯಲಕ್ಷ್ಮಿಯಂತೆ ಒಪ್ಪುತ್ತಿದ್ದರು.

## ಅಧ್ಯಾಯ

### ರಾಜನೀತಿ ಕೌಶಲ್ಯ ; ಮಾತೃವಾತ್ಸಲ್ಯ

ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಮುಮ್ಮಡಿ ಶ್ರೀ ಕೃಷ್ಣರಾಜ ಒ
ಯರಿಗೆ ಪುಣ್ಯದೇವತೆಯಂತೆ ಬೆಂಗಾವಲಿಗೆ ನಿಂತಿದ್ದರು. ಒಡೆಯರನ
ಲಾಲಿಸಿ ಪಾಲಿಸುವುದರಲ್ಲಿಯೇ ಅವರು ತೃಪ್ತರಾಗಲಿಲ್ಲ. ಮೈಸೂರು ರಾಜ್ಯ
ಪ್ರಜಾಕೋಟಿಯ ಸುಖಸಾಧನೆಗಾಗಿ ಅವರು ಹಾರೈಸುತ್ತಿದ್ದರು. ದಿವಾ
ಪೂರ್ಣಯ್ಯನವರಿಗೆ ಸಂದರ್ಭೋಚಿತವಾದ ಸಲಹೆಗಳನ್ನು ತಿಳಿಸುತ್ತ ದೇಶ
ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸಲು ನೆರವಾದರು. ನವಾ
ದೌಲತ್ತಿನಲ್ಲಿ ಪ್ರಜಾನೆಮ್ಮದಿಯಿರಲಿಲ್ಲ. ಯಾವಾಗಲೂ ದಂಡಯಾತ್ರೆಗ
ನಡೆಯುತ್ತಿದ್ದುವು. ಶತ್ರುಗಳು ದಂಡೆತ್ತಿ ಬರುತ್ತಿದ್ದರು. ಬಿಡುವಿ
ಯುದ್ಧಗಳು ಒಂದಾದಮೇಲೊಂದು ನಡೆಯುತ್ತಿದ್ದುವು. ಸೈನ್ಯಶೇಖರ
ಯುದ್ಧ ಸನ್ನಾಹ, ಇವು ನಡೆಯುತ್ತಿದ್ದಂತೆಯೇ ರೈತರ ಪೈರು ಪಚ್ಚೆಗ
ಹಾಳಾಗುತ್ತಿದ್ದುವು. ಅನೇಕ ಸಮಯಗಳಲ್ಲಿ ದರೋಡೆಕಾರರೂ ಜನರನ
ಪೀಡಿಸುತ್ತಿದ್ದರು. ವ್ಯವಸಾಯ, ವ್ಯಾಪಾರ ಮತ್ತು ಕೈಗಾರಿಕೆಗಳು ನಿರಾತ
ವಾಗಿ ಅಭಿವೃದ್ಧಿಯಾಗುತ್ತಿರಲಿಲ್ಲ. ಭೂವ್ಯವಸಾಯವೇ ನಾಡಿನ ಸಂಪತ್ತಿ
ಮೂಲವಾಗಿತ್ತು. ಸಂತೃಪ್ತನಾದ ರೈತನಿಂದ ನಾಡು ನಲಿಯುತ್ತದೆಂ
ಲಕ್ಷ್ಮಮ್ಮಣ್ಣಿಯವರು ಮನಗಂಡರು. ನೀರಾವರಿಯ ಕೆಲಸಗಳನ್ನು ನಡೆಸಿ
ವ್ಯವಸಾಯಕ್ಕೆ ಬೇಕಾದ ಸಹಾಯವನ್ನು ಒದಗಿಸಿದರು. ನವಾಬರ ಕಾಲ
ಜನರು ತಮ್ಮ ಸ್ಥಳಗಳನ್ನು ಬಿಟ್ಟು ವಲಸೆ ಹೋಗಿದ್ದರು. ಲಕ್ಷ್ಮಮ್ಮ
ಯವರ ರಾಜನೀತಿ ಕೌಶಲದಿಂದ ಪ್ರಜೆಗಳು ಪುನಃ ತಮ್ಮ ತಮ್ಮ ಸ್ಥಳಗ
ಬಂದು ಸೇರುತ್ತಿದ್ದರು. ಅವರು ಮೈಸೂರು ಪಟ್ಟಣದಲ್ಲಿ ಹಿಂದೆ ಅರಮ
ಯಿದ್ದ ಸ್ಥಳದಲ್ಲಿಯೇ ಹೊಸದಾಗಿ ಅರಮನೆಯನ್ನು ಕಟ್ಟಿಸಿದರು. ಮೈಸೂ
ಪಟ್ಟಣ ಜನಭರಿತವಾಗುತ್ತ ಬಂದು ವರ್ತಕರೂ. ಕುಶಲಕಲಾವಿದ

ಪಂಡಿತರೂ, ಕೂಲಿಯ ಜನರೂ ರಾಜಧಾನಿಯಲ್ಲಿ ನೆಲಸಲಾರಂಭಿಸಿದರು. ಮೈಸೂರು ಸುಂದರ ನಗರವಾಗುತ್ತಿತ್ತು. ನಾಡಿನಲ್ಲೆಲ್ಲಾ ಶಾಂತಿ ಸಮಾಧಾನ ಗಳು ತುಂಬಿದುವು. ರಾಜಭಂಡಾರ ಅಕ್ಷಯವಾಗುತ್ತಿತ್ತು. ಇಂಗ್ಲೀಷ್ ಸರ್ಕಾರದವರಿಗೆ ಕೊಡಬೇಕಾಗಿದ್ದ ಕಪ್ಪ ಕಾಣಿಕೆಗಳು ಕಾಲಕ್ಕೆ ಸರಿಯಾಗಿ ತಪ್ಪದೆ ಸಂದಾಯವಾಗುತ್ತಿದ್ದವು. ಸಸ್ಯ ಸಂಪತ್ತು ಯಥೇಚ್ಛವಾಗಿ ಬರು ವಂತೆ ಲಕ್ಷ್ಮಮ್ಮಣ್ಣಿಯವರು ಪೂರ್ಣಯ್ಯನವರೊಂದಿಗೆ ಪರ್ಯಾಲೋಚಿಸಿ ದೇಶದಲ್ಲಿ ಅನೇಕ ಕೆರೆ ಕಟ್ಟೆಗಳನ್ನು ನಿರ್ಮಿಸಿದರು. ಮೇಲುಕೋಟೆ ಕೆರೆ ಮತ್ತು ಲಕ್ಷ್ಮಣ ತೀರ್ಥಕ್ಕೆ ಅಡ್ಡಗಟ್ಟೆ ಹಾಕಿಸಿ, ಸಾಗರಕಟ್ಟೆ ಕೆರೆ— ಇವು ಗಳನ್ನು ಕಟ್ಟಿಸಿದರು. ಅನೇಕ ಊರುಗಳನ್ನು ಕಟ್ಟಿಸಿ ಜನರಿಗೆ ವಸತಿ ಸೌಕರ್ಯಗಳನ್ನು ಕಲ್ಪಿಸಿದರು. ವ್ಯವಸಾಯವನ್ನು ಅಭಿವೃದ್ಧಿಪಡಿಸಬೇಕೆಂಬ ಆಕಾಂಕ್ಷೆಯಿಂದ ರೈತರಿಗೆ ಮುಂಗಡಗಳನ್ನು ಅರಮನೆಯಿಂದ ಕೊಡಿಸಿ ಅವರಿಗೆ ಪ್ರೋತ್ಸಾಹವನ್ನು ನೀಡುತ್ತಿದ್ದರು. ಕಾಲಕ್ಕೆ ಸರಿಯಾಗಿ ಮಳೆಯಾಗದೆ ಬೆಳೆ ಕೆಟ್ಟುಹೋದ ಸಂದರ್ಭಗಳಲ್ಲಿ ರೈತರಿಂದ ಕಂದಾಯವನ್ನು ವಸೂಲು ಮಾಡು ತ್ತಿರಲಿಲ್ಲ. ಒಳದೇಶದಲ್ಲಿ ವ್ಯಾಪಾರ ಸರಿಯಾಗಿ ನಡೆಯಲು ಮಾರ್ಗಗಳನ್ನು ನಿರ್ಮಿಸಿ, ಮಾರ್ಗಗಳ ಎರಡು ಕಡೆಗಳಲ್ಲಿಯೂ ಸಾಲುಮರಗಳನ್ನು ಹಾಕಿ ಸಿದರು. ಅಲ್ಲಲ್ಲಿ ಅರವಟ್ಟಿಗೆಗಳನ್ನು ಇಡಿಸಿ ಪ್ರಯಾಣಿಕರಿಗೆ ಸಹಾಯ ಮಾಡಿದರು. ಅನೇಕ ಕೈಗಾರಿಕೆಗಳು ಅಭಿವೃದ್ಧಿಗೆ ಬಂದುವು. ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ತಮ್ಮ ಪತಿಯ ಕಾಲಾನಂತರ ನಿರ್ಬಂಧವಲ್ಲಿದ್ದುದ ರಿಂದ ಅವರಿಗೆ ರಾಜ್ಯಾಡಳಿತ ವಿಚಾರಗಳಾಗಲಿ, ರಾಜ್ಯ ಪರಿಸ್ಥಿತಿಯಾಗಲಿ ತಿಳಿಯುತ್ತಿರಲಿಲ್ಲ. ಹೀಗಿದ್ದೂ, ಅವರು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯ ರಿಗೆ ಪಟ್ಟಾಭಿಷೇಕವಾದಮೇಲೆ ಒಂದೆರಡು ವರ್ಷಗಳಲ್ಲಿಯೇ ದೇಶದ ಪ್ರಗತಿ ಯನ್ನು ನಾನಾಮುಖವಾಗಿ ಸಾಧಿಸಿದರು. ಇದು ಅವರ ರಾಜನೀತಿ ಕೌಶಲ್ಯ ವನ್ನು ವ್ಯಕ್ತಪಡಿಸುತ್ತದೆ. ಜನರ ಕಷ್ಟ ನಷ್ಟಗಳನ್ನು ಕಂಡು ಅವರು ಮರುಗ ತ್ತಿದ್ದರು. ಅವರು ಮಾತೃವಾತ್ಸಲ್ಯದಿಂದ ನಾಡಿನ ರಕ್ಷಣೆಯಲ್ಲಿ ತೊಡ ಗಿದ್ದರು.

ಪೂರ್ಣಯ್ಯನವರು ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರ ಸಮಾ ಲೋಚನೆಯಿಂದ ರಾಜಕಾರ್ಯಗಳನ್ನು ದಕ್ಷತೆಯಿಂದ ನಡೆಸುತ್ತಿದ್ದರು.

ಅವರು ರಾಜಕಾರ್ಯಗಳಲ್ಲಿ ನುರಿತಿದ್ದರು. ಚಿಕ್ಕ ವಯಸ್ಸಿನಿಂದಲ
ಹೈದರಾಲಿಯ ಮನೆವಾರ್ತೆಯಲ್ಲಿ ಸೇರಿಕೊಂಡಿದ್ದರು. ತರುವಾ
ರಾಜ್ಯಾಡಳಿತದಲ್ಲಿ ಸಣ್ಣ ಅಧಿಕಾರದಿಂದ ದೊಡ್ಡ ಪದವಿಯವರೆಗೂ ಬಂದ
ಅವರ ಬುದ್ಧಿಶಕ್ತಿ ಸೂಕ್ಷ್ಮವಾಗಿತ್ತು. ರಾಜ್ಯದ ಪರಿಸ್ಥಿತಿಯೆಲ್ಲ ಅವರಿ
ತಿಳಿದಿತ್ತು. ಆದ್ದರಿಂದ ಅವರು ನಾಡಿನ ಏಳ್ಗೆಯನ್ನು ಸಾಧಿಸಲು ಶಕ್ತರಾ
ದ್ದರು. ಮೈಸೂರು ರಾಜ್ಯದ ಜೀವನ ರಂಗದಲ್ಲಿ ಪೂರ್ಣಯ್ಯನವರ ಪಾ
ಪರಿಸ್ಫುಟವಾಗಿ ನಿಂತಿರುತ್ತದೆ. ಮೈಸೂರು ಪ್ರಭುಗಳಿಗೆ ಯಾವುದೊಂದ
ಸ್ವಾತಂತ್ರ್ಯವೂ ಇಲ್ಲದೆ ಇದ್ದಾಗ ಜನರ ಅಭಿಪ್ರಾಯ ಹೇಗಿತ್ತೆಂಬುದನ್
ಅರಿತಿದ್ದರು. ಅವರು ದಿವಾನರಾಗಿ ಬಂದಮೇಲೆ ನಾಡಿನ ನಾಡಿ ಯಾವ ರೀ
ಚಲಿಸುತ್ತದೆಯೆಂಬುದನ್ನು ಸುಲಭವಾಗಿ ತಿಳಿದರು. ಆಯಾ ಸನ್ನಿವೇಶಗಳ
ಸರಿಯಾಗಿ ಜನಸಾಮಾನ್ಯದ ಮನೋಗತಿಯನ್ನು ಗ್ರಹಿಸಿ ಜನರ ನೆಮ್ಮದಿ
ಬೇಕಾದ ಸೌಕರ್ಯಗಳನ್ನು ಮೊಟ್ಟಮೊದಲು ಒದಗಿಸಿಕೊಟ್ಟರು. ಕ್ರಾಂ
ಯಿಂದ ಶಾಂತಿಗೆ ಜನ ತಿರುಗುತ್ತಿತ್ತು. ಆ ಸಂಧಿಕಾಲದಲ್ಲಿ ಅರಮನೆ
ಒಳಆಡಳಿತವನ್ನು ನೋಡಿಕೊಳ್ಳುವುದರಲ್ಲಿ ಲಕ್ಷ್ಮಮ್ಮಣ್ಣಿಯವರು ಸಾಹ
ಪಟ್ಟರು. ಅದರಂತೆಯೇ, ಪೂರ್ಣಯ್ಯನವರ ಮೂಲಕ ಅವರು ರಾಜಕಾರ್ಯ
ಗಳನ್ನು ನಿರ್ವಹಿಸುತ್ತಿದ್ದರು.

ಪೂರ್ಣಯ್ಯನವರು ತಿರುಚನಾಪಳ್ಳಿ ಪ್ರಾಂತದ ತಿರುಕಂಬೂರು ಎಂ
ಗ್ರಾಮದವರು. ಅವರ ತಂದೆಯ ಹೆಸರು ಕೃಷ್ಣಾಚಾರ್ಯ; ತಾಯಿ
ಹೆಸರು ಲಕ್ಷ್ಮಮ್ಮ. ಅವರು ಮಾಧ್ವ ಬ್ರಾಹ್ಮಣರು. ಪೂರ್ಣಯ್ಯನವ
ಇನ್ನೂ ಚಿಕ್ಕವಯಸ್ಸಿನವರಾಗಿದ್ದಾಗಲೇ ಅವರ ತಂದೆ ಕಾಲವಾದರು. ತಾ
ಲಕ್ಷ್ಮಮ್ಮನವರೇ ಆಗ ಚಿಕ್ಕ ಮಕ್ಕಳಾಗಿದ್ದ ಪೂರ್ಣಯ್ಯನವರನ್ನೂ ಅವ
ತಮ್ಮ ವೆಂಕಟರಾಯನನ್ನೂ ಕಾಪಾಡಬೇಕಾಯಿತು. ಅವರು ಕೆಲವು ಕಾಲ
ಮೇಲೆ ಜೀವನೋಪಾಯವನ್ನು ಹುಡುಕುತ್ತ, ಆ ಕಾಲದಲ್ಲಿ ಪ್ರಸಿದ್ಧವಾಗಿ
ಶ್ರೀರಂಗಪಟ್ಟಣಕ್ಕೆ ಬಂದು ಸೇರಿದರು. ಆಗ ಅವರಿಗೆ ಹದಿನಾಲ್ಕು ವ
ವಯಸ್ಸು. ಶ್ರೀರಂಗಪಟ್ಟಣದಲ್ಲಿ ಪ್ರಸಿದ್ಧ ವರ್ತಕನಾಗಿದ್ದ ಅನ್ನದಾನಶೆ
ಯೆಂಬುವನ ಅಂಗಡಿಯಲ್ಲಿ ಕರಣಿಕರಾಗಿದ್ದರು. ಅನ್ನದಾನಶೆಟ್ಟಿ
ಅರಮನೆಗೂ ಹೈದರನ ಸೈನ್ಯಕ್ಕೂ ಬೇಕಾದ ಎಲ್ಲ ಸಾಮಗ್ರಿಗಳನ್ನೂ ಒದಗಿ

ತಿದ್ದುದರಿಂದ, ಪೂರ್ಣಯ್ಯನವರು ಆಗಾಗ ಲೆಕ್ಕಾಚಾರ ಮಾಡಿಕೊಂಡು ಬರಲು ಹೈದರನ ಬಳಿಗೆ ಹೋಗಿಬರುತ್ತಿದ್ದುದುಂಟು. ಲೆಕ್ಕಗಳನ್ನು ಸರಿಯಾದ ರೀತಿಯಲ್ಲಿಟ್ಟು, ಪ್ರತಿಯೊಂದು ಅಂಶವನ್ನೂ ಪರಿಷ್ಕಾರವಾಗಿ ವಿವರಿಸುತ್ತಿದ್ದ ಪೂರ್ಣಯ್ಯನವರ ಚಟುವಟಿಕೆ, ಜಾಣ್ಮೆ, ವಿನಯ ವಿಧೇಯತೆಗಳನ್ನು ಕಂಡು ಹೈದರನು ಬಹಳ ಸಂತೋಷಪಡುತ್ತಿದ್ದನು. ಜಾಗರೂಕರಾದ ಪೂರ್ಣಯ್ಯ ನವರನ್ನು ಹೈದರನು ತನ್ನ ಬಳಿ ಕೆಲಸಕ್ಕೆ ಇಟ್ಟುಕೊಳ್ಳಬೇಕೆಂದು ಆಲೋಚಿಸು ತ್ತಿದ್ದನು. ಕೆಲವು ದಿನಗಳಲ್ಲಿಯೇ, ಹೈದರನು ಪೂರ್ಣಯ್ಯನವರನ್ನು ತನ್ನ ಖಜಾನೆಯಲ್ಲಿ ಗುಮಾಸ್ತೆಯ ಕೆಲಸಕ್ಕೆ ನೇಮಕಮಾಡಿದನು. ಪೂರ್ಣಯ್ಯ ನವರು ಬುದ್ಧಿಸಾಮರ್ಥ್ಯದಿಂದ ಎಲ್ಲ ಕೆಲಸಗಳನ್ನೂ ತೃಪ್ತಿಕರವಾಗಿ ನಿರ್ವಹಿಸಿ ಕೊಂಡು, ಹೈದರನ ಪ್ರೀತಿಗೆ ಪಾತ್ರರಾದರು. ಸ್ವಲ್ಪಕಾಲದಲ್ಲಿಯೇ ಅವರು ಮುಲ್ಕಿ ಮತ್ತು ಫೌಜು ಈ ಎರಡು ಇಲಾಖೆಗಳ ಮೊಖ್ತೇಸರರಾದರು. ಹೈದರನು ಅವರ ಕಾರ್ಯಚತುರತೆ, ಶ್ರದ್ಧಾಭಕ್ತಿಗಳಿಗೆ ಮೆಚ್ಚಿ ಅವರಿಗೆ ಪೆಗ್ಗಡ ದೇವನಕೋಟೆ ಪ್ರಾಂತದ ಮಾರಹಳ್ಳಿ ಎಂಬ ಗ್ರಾಮವನ್ನು ಜಹಗೀರಾಗಿ ಕೊಟ್ಟನು.

ಪ್ರಭುಸೇವಾಪರಾಯಣರಾದ ಪೂರ್ಣಯ್ಯನವರು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರಿಗೆ ದಿವಾನರವರಾಗಿದ್ದುದರಿಂದ ಲಕ್ಷ್ಮಮ್ಮಣ್ಣಿಯವರು ಪ್ರಜಾಭ್ಯುದಯ ಕಾರ್ಯಗಳನ್ನು ಸಾಧಿಸಲು ತುಂಬ ಅನುಕೂಲವಾಯಿತು. ಲಕ್ಷ್ಮಮ್ಮಣ್ಣಿಯವರು ಅರಮನೆಯಲ್ಲಿ ಸಂಪ್ರದಾಯಾನುಸಾರವಾಗಿ ನಡೆಯ ಬೇಕಾಗಿದ್ದ ಕಾರ್ಯಗಳನ್ನೆಲ್ಲಾ ಮುಂದೆಯೂ ನಡೆಯಿಸಿಕೊಂಡು ಬರ ಬೇಕೆಂಬುದಾಗಿ ಕಟ್ಟಳೆಮಾಡಿ, ಒಡೆಯರ ಸೇವಾವೃತ್ತಿಗಾಗಿ ಅನುಭವಸ್ಥರಾದ ಆಪ್ತರನ್ನು ನೇಮಿಸಿ, ರಾಜಬಂಧುಗಳಿಗೂ ಆಶ್ರಿತರಿಗೂ ಜೀವನೋಪಾಯ ಗಳನ್ನು ಕಲ್ಪಿಸಿಕೊಟ್ಟರು. ಮಹಾರಾಜರ ಶ್ರೇಯೋಭಿವೃದ್ಧಿಗಾಗಿ ಅರಮನೆ ಯಲ್ಲಿ ಪ್ರತಿನಿತ್ಯವೂ ದೇವರ ಪೂಜೆಯೂ, ಜಪತಪಗಳೂ, ಧಾನಧರ್ಮಗಳೂ ನಡೆಯುವಂತೆ ಏರ್ಪಾಟು ಮಾಡಿದರು. ಶ್ರೀರಂಗಪಟ್ಟಣದ ಬಳಿಯಲ್ಲಿ ಕಾವೇರೀ ನದಿಗೆ ಸೇತುವೆಯನ್ನು ಕಟ್ಟಿಸಿ, ಅದಕ್ಕೆ ವೆಲ್ಲೆಸ್ಲಿ ಸೇತುವೆ ಎಂದು ಹೆಸರಿಟ್ಟರು. ಆಗ ರೆಸಿಡೆಂಟರವರಾಗಿದ್ದ ಕ್ಲೋಸ್‌ರವರ ಜ್ಞಾಪಕಾರ್ಥವಾಗಿ

ಕ್ಲೋಸ್‌ಪೇಟೆ ಎಂಬ ಊರನ್ನು ಬೆಂಗಳೂರು–ಮೈಸೂರು ಮಾರ್ಗಮಧ್ಯದ
ಕಟ್ಟಿಸಿದರು.

ಮಹಾರಾಜರು ಪ್ರಾಪ್ತವಯಸ್ಕರಾದರು. ಲಕ್ಷ್ಮಮ್ಮಣ್ಣಿಯವರ
ಕುಮಾರರಿಗೆ ವಿವಾಹಮಾಡಬೇಕೆಂದು ಯೋಚಿಸಿದರು. ರಾಜಬಂಧು ವರ್ಗ
ದಲ್ಲಿ ಅನುರೂಪ ಕನ್ಯೆಯರನ್ನು ತಾವೇ ನೋಡಿ, ಸರ್ವಲಕ್ಷಣಸಂಪನ್ನೆ
ಯಾಗಿದ್ದ ಬೆಟ್ಟದ ಕೋಟೆ ಗೋಪಾಲರಾಜ ಅರಸಿನವರ ಮಗಳು ದೇವ
ಜಮ್ಮಣ್ಣಿಯನ್ನು ಒಪ್ಪಿ, ಮಹಾರಾಜರಿಗೆ ತಂದುಕೊಳ್ಳಬೇಕೆಂದು ನಿಶ್ಚಯಿ
ಸಿದರು. ಅರಮನೆಯ ಪುರೋಹಿತರು ಶುಭ ಲಗ್ನವನ್ನು ಗೊತ್ತುಮಾಡಿದರು
ಲಕ್ಷ್ಮಮ್ಮಣ್ಣಿಯವರು ಹೇಳಿದಂತೆ ಪೂರ್ಣಯ್ಯನವರು ವಿವಾಹದ ಏರ್ಪಾಟು
ಗಳನ್ನು ಸಿದ್ಧಪಡಿಸಿದರು. ರಾಜಧಾನಿಯ ಶೃಂಗಾರ ನಡೆಯಿತು. ಮಹಾ
ರಾಜರ ಪಟ್ಟಾಭಿಷೇಕದ ವೈಭವವನ್ನು ನೋಡಿದ್ದ ಜನ ಮತ್ತೊಮ್ಮೆ ಆನಂ
ದಿಂದ ನಲಿಯುವಂತಾಯಿತು. ವಿವಾಹಲಗ್ನ ಸನ್ನಿಹಿತವಾಗುತ್ತ ಬಂತು
ಬಂಧುವರ್ಗದವರೂ, ರಾಜಮಿತ್ರರೂ, ಪಾಳೆಯಗಾರರೂ ದೇಶದೇಶಗಳಿಂ
ಜನರೂ ಬಂದು ಸೇರುತ್ತಿದ್ದರು. ಬ್ರಾಹ್ಮಣರೂ ಜಂಗಮರೂ ಎಲ್ಲರಿಗಿಂತಲು
ಮುಂಚಿತವಾಗಿಯೇ ಬಂದಿದ್ದರು. ಮದುವೆಯ ಹಿಂದಿನ ರಾತ್ರಿ ವಧುವಿ
ಕಡೆಯವರನ್ನು ರಾಜಗೌರವದಿಂದ ಎದುರುಗೊಂಡು ಅರಮನೆಯಲ್ಲಿ ಬಿಡಾ
ಮಾಡಿಸಿದರು. ಮರುದಿನ ಶುಭಲಗ್ನದಲ್ಲಿ ಮುಮ್ಮಡಿ ಶ್ರೀ ಕೃಷ್ಣರಾ
ಒಡೆಯರಿಗೂ ಶ್ರೀ ದೇವಾಜಮ್ಮಣ್ಣಿಯವರಿಗೂ ವಿವಾಹಮಹೋತ್ಸವ
ವಿಜೃಂಭಣೆಯಿಂದ ಶಾಸ್ತ್ರೋಕ್ತವಾಗಿ ನಡೆಯಿತು. ಆ ರಾತ್ರಿ ರಾಜದಂಪತಿಗ
ಆನೆಯಮೇಲೆ ಚಿನ್ನದ ಅಂಬಾರಿಯಲ್ಲಿ ಕುಳಿತು ರಾಜಬೀದಿಗಳಲ್ಲಿ ಮೆರವಣಿ
ಬಂದರು. ಆ ಆನಂದೋತ್ಸವವನ್ನು ನೋಡಿ ಲಕ್ಷ್ಮಮ್ಮಣ್ಣಿಯವರು ಆನಂ
ಬಾಷ್ಪಗಳನ್ನು ಸುರಿಸಿದರು. ಜನರೆಲ್ಲ ಜಯಜಯವೆಂದು ಪ್ರಭು ದಂಪ
ಗಳನ್ನು ಕಂಡು ಕೈಮುಗಿಯುತ್ತ ತಮ್ಮ ರಾಜಭಕ್ತಿಯನ್ನು ಸೂಚಿಸುತ್ತಿದ್ದ
ಮದುವೆ ವಿಶೇಷ ವೈಭವದಿಂದ ಸಾಂಗವಾಗಿ ನಡೆಯಿತು.

ಮಹಾರಾಜರಿಗೆ ಮುಂದೆ ಕೆಲವೆ ವರ್ಷಗಳ ತರುವಾಯ ಮತ್ತೆ ನಾಲ
ವಿವಾಹಗಳಾದುವು. ಬಾಗಳೀ ದೇಶೀ ಅರಸಿನವರ ಮಗಳು ಶ್ರೀ ಲಕ್ಷ್ಮಿ
ವಿಲಾಸ ಸನ್ನಿಧಾನದ ದೇವಾಜಮ್ಮಣ್ಣಿಯವರೂ, ಬೆಟ್ಟದಕೋಟೆ ಗೋಪಾ

ರಾಜೇ ಅರಸಿನವರ ದ್ವಿತೀಯ ಪುತ್ರಿ ರಮಾವಿಲಾಸ ಸನ್ನಿಧಾನದ ಚಲುವಾ ಜಮ್ಮಣ್ಣಿಯವರೂ, ತುರುವೇಕೆರೆ ವೀರರಾಜೆ ಅರಸಿನವರ ಕುಮಾರಿ ಸೀತಾ ವಿಲಾಸ ಸನ್ನಿಧಾನದ ದೇವಾಜಮ್ಮಣ್ಣಿಯವರೂ. ಹುಲ್ಲಹಳ್ಳಿ ನಂಜರಾಜೇ ಅರಸಿನವರ ಮಗಳು ಹೊಸ ಸನ್ನಿಧಾನದ ಲಕ್ಷ್ಮಮ್ಮಣ್ಣಿಯವರೂ ಮಹಾರಾಜರ ರಾಣಿವಾಸಕ್ಕೆ ಪತ್ನಿಯರಾಗಿ ಬಂದರು.

ಲಕ್ಷ್ಮಮ್ಮಣ್ಣಿಯವರು ಪಟ್ಟ ಪರಿಶ್ರಮದ ಫಲದಿಂದ ರಾಜವಂಶವೃಕ್ಷ ಕೋಮಲವಾಗಿ ಬೆಳೆಯುತ್ತಿತ್ತು. ನವರಾತ್ರಿ ಉತ್ಸವದಲ್ಲಿ ಮಹಾರಾಜರು ಸಿಂಹಾಸನಾರೂಢರಾಗಿ ವಿರಾಜಿಸುತ್ತಿದ್ದಾಗ ಲಕ್ಷ್ಮಮ್ಮಣ್ಣಿಯವರು ನೋಡಿ ಆನಂದಪರವಶರಾಗುತ್ತಿದ್ದರು. "ಸಮಸ್ತ ಭೂಮಂಡಲ ಮಂಡಲಾಯಮಾನ ನಿಖಿಲದೇಶಾವತಂಸ ಕರ್ಣಾಟಕ ಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮೈ ಸೂರು ಮಹಾ ಸಂಸ್ಥಾನ ದೇದೀಪ್ಯಮಾನಾ ವಿಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿ ರಾಜ ರಾಜಪರಮೇಶ್ವರ, ಪ್ರೌಢಪ್ರತಾಪಾಪ್ರತಿಮವೀರ ನರಪತಿ ಬಿರುದೆಂತೆಂಬರ ಗಂಡ, ಲೋಕೈಕವೀರ, ಯದುಕುಲಪಯಃಪಾರಾವಾರ ಕಲಾನಿಧಿ ಶಂಖ ಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವ ರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನೀ ಕೆಂಪನಂಜಮಾಂಬಾ ಗರ್ಭ ಸುಧಾಂಬುಧಿ ರಾಕಾ ಸುಧಾಕರಾಯಮಾಣ, ಶ್ರೀ ಚಾಮುಂಡಿಕಾ ವರಪ್ರಸಾದೋದ್ಭವ ಶ್ರೀಮನ್ಮೈ ಸೂರು ಪುರವರಾಧೀಶ್ವರರಾದ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು" ಕುಲ ದೀಪಕರಾಗಿ ಪ್ರವರ್ಧಮಾನರಾಗುತ್ತಿದ್ದುದನ್ನು ಕಂಡು ಆ ಮಹಾಮಾತೆ ಆನಂದಿಸುತ್ತಿದ್ದರು.

ಲಕ್ಷ್ಮಮ್ಮಣ್ಣಿಯವರು ಲೋಕಾನುಭವ ಪರಿಪೂರ್ಣರಾಗಿದ್ದರು. ಅವರ ಪರಿಪಕ್ವ ಜ್ಞಾನಾಮೃತವನ್ನು ಸವಿದು ಒಡೆಯರು ತೇಜಃಪುಂಜರಾಗುತ್ತಿದ್ದರು. ಅವರು ತಮ್ಮ ಮೊಮ್ಮಗ ಶ್ರೀ ಕೃಷ್ಣರಾಜ ಒಡೆಯರಿಗೆ ರಾಜಕೀಯ ಗುರು ವಾಗಿದ್ದರು. ಮಹಾಮಾತೆಯಂತೆ ಅವರ ಲಾಲನೆ ಪಾಲನೆಗಳನ್ನು ಮಾಡಿ ಕೊಂಡು ಮಹಾಮಂತ್ರಿಯಂತೆ ಅವರಿಗೆ ರಾಜಕಾರ್ಯಗಳಲ್ಲಿ ಹಿತೈಷಿಗಳಾ

ಗಿದ್ದರು. ಅವರು ಆ ತರುಣ ಮಹಾರಾಜರಿಗೆ ಬೋಧಿಸುತ್ತಿದ್ದ ರಾಜಧರ್ಮ
ನೀತಿಯನ್ನು ಕೇಳಿದರೆ ಅವರ ಪ್ರಜ್ಞಾಶಕ್ತಿ ತಿಳಿಯುತ್ತದೆ. ರಾತ್ರಿ ಬಹಳ
ಹೊತ್ತಿನವರೆಗೆ ಅವರು ಮಹಾರಾಜರ ಸಮೀಪದಲ್ಲಿ ಕುಳಿತುಕೊಂಡು ರಾಜ
ಕಾರ್ಯಗಳಲ್ಲಿ ತಮ್ಮ ಸಲಹೆಗಳನ್ನು ತಿಳಿಸುತ್ತಿದ್ದರು. "ದೊರೆಯೆಂಬ
ವೃಕ್ಷಕ್ಕೆ ಪ್ರಜೆಗಳೇ ಬೇರುಗಳು. ರಾಜರಾದವರಿಗೆ ಯಾವಾಗಲೂ ಮುಂದಾ
ಲೋಚನೆ ಇರಬೇಕು. ಯಾವ ವಿಚಾರವನ್ನೂ ಚೆನ್ನಾಗಿ ಪರ್ಯಾಲೋಚಿಸದೆ
ಆತುರದಲ್ಲಿ ಯಾವ ಕಾರ್ಯವನ್ನೂ ಮಾಡಬಾರದು. ಆಪ್ತರೂ, ಸದ್ವಂಶೀ
ಯರೂ, ಸ್ನೇಹಪರರೂ, ಜ್ಞಾನವಂತರೂ ಆದ ಅಧಿಕಾರಿಗಳನ್ನು ನೇಮಿಸಿ
ಕೊಳ್ಳಬೇಕು. ಒಳ್ಳೆಯ ಮನೆತನದಲ್ಲಿ ಹುಟ್ಟಿದ್ದರೂ ದುಷ್ಟರನ್ನು ನಂಬ
ಬಾರದು. ಮಲಯಗಿರಿಯ ಚಂದನದಿಂದ ಹುಟ್ಟಿದ ಬೆಂಕಿಯಾದರೂ
ಸುಟ್ಟೇಸುಡುವುದು. ಮಂತ್ರಿಗಳನ್ನು ನೇಮಿಸಿಕೊಳ್ಳುವುದರಲ್ಲಿ ಬಹಳ ಜಾಣ್ಮೆ
ಯಿಂದಲೂ, ದೀರ್ಘಾಲೋಚನೆಯಿಂದಲೂ ವರ್ತಿಸಬೇಕು. ಬೆಕ್ಕುಗಳ
ಗುಂಪಿಗೆ ಹಾಲನ್ನು ಕೊಟ್ಟಂತೆ ಅನರ್ಹರಾದ ಅಧಿಕಾರಿಗಳ ಕೈಗೆ ರಾಜ್ಯಭಾರ
ವನ್ನು ಕೊಟ್ಟು ಸ್ವೇಚ್ಛಾವಿಹಾರಿಯಾಗಿ ಮೈಮರೆತಿರುವ ರಾಜನು ಅವಿವೇಕಿ
ಯಾಗುತ್ತಾನೆ. ಯಾವ ಕೆಲಸವನ್ನಾದರೂ ಸ್ವತಃ ಪರಾಂಬರಿಸಿ ಮಾಡಬೇಕು.
ಎಲ್ಲರನ್ನೂ ತನ್ನ ಅಂತರಂಗಕ್ಕೆ ತೆಗೆದುಕೊಳ್ಳಬಾರದು. ಆರಿಸಿದ ಆಣಿ
ಮುತ್ತುಗಳಂಥ ಕೆಲವನ್ನು ಮಾತ್ರ ತಮ್ಮ ಆಪ್ತವರ್ಗಕ್ಕೆ ಸೇರಿಸಿಕೊಳ್ಳಬೇಕು.
ಪ್ರಜಾಭಿಪ್ರಾಯವನ್ನು ಮನ್ನಿಸಿ ರಾಜಶಾಸನಗಳನ್ನು ರಚಿಸುತ್ತಿರಬೇಕು.
ಪ್ರಜೆಯೇ ನಾಡಿನ ಸೌಭಾಗ್ಯ ; ಪ್ರಜೆಯೇ ರಾಜನ ಅಂತಃಪ್ರಾಣ, ಪ್ರಜಾ
ಕ್ಷೇಮಸಾದನೆಗಾಗಿ ಪ್ರಭು ತನ್ನ ಕ್ಷೇಮವನ್ನೂ ತೃಣೀಕರಿಸಲು ಸಿದ್ಧನಾಗಿರ
ಬೇಕು. ವಿಪತ್ಸಮಯದಲ್ಲಿ ಎದೆಗುಂದಬಾರದು. ಧೈರ್ಯದಿಂದಲೂ
ಚಾಕಚಕ್ಯತೆಯಿಂದಲೂ ಕಾರ್ಯಸಾಧನೆ ಮಾಡಬೇಕು. ವಿಷಯಲಂಪಟ
ನಾಗಿ ಪ್ರಜಾಪೀಡೆಯನ್ನು ಮಾಡಬಾರದು. ಬ್ರಾಹ್ಮಣರನ್ನೂ ಸತ್ಪುರುಷರನ್ನೂ
ವಿದ್ವಾಂಸರನ್ನೂ ಆದರಿಸಬೇಕು. ನಾಡಿನ ಸಂಸ್ಕೃತಿಯನ್ನು ಕಾಪಾಡಬೇಕು.
ಧರ್ಮ, ಸಾಹಿತ್ಯ, ಸಂಸ್ಕೃತಿಗಳಿಗೆ ರಾಜಾಶ್ರಮವನ್ನು ನೀಡಿ ಪ್ರಜಾಪ್ರೇಮ
ವನ್ನು ಗಳಿಸಬೇಕು. ದುಷ್ಟರನ್ನು ಶಿಕ್ಷಿಸಿ, ನಾಡಿನ ನೆಮ್ಮದಿಗೆ ಭಂಗಬರದಂ
ರಾಜ್ಯಪರಿಪಾಲನೆ ಮಾಡಬೇಕು. ಗೂಢಚಾರರನ್ನು ನೇಮಿಸಿ, ದೇಶವಿದೇ

ಗಳಲ್ಲಿ ನಡೆಯುವ ರಾಜಕೀಯ, ಧಾರ್ಮಿಕ, ಸಾಮಾಜಿಕ ಚಲನವಲನಗಳನ್ನು ಅರಿಯಬೇಕು. ಅಷ್ಟದಿಕ್ಪಾಲಕರ ಅಂತಗಳಿಂದ ರಾಜನು ಪ್ರಜಾರಂಜಕನಾಗಿರುತ್ತಾನೆಂದು ಹಿರಿಯರು ಹೇಳುವರು. ಆದ್ದರಿಂದ ಪ್ರಭುವಾದವನು ಶೌರ್ಯ, ಔದಾರ್ಯ, ಧೈರ್ಯ, ಸ್ಥೈರ್ಯ, ಮನೋಧಾರ್ಯ, ಜೀವಕಾರುಣ್ಯ ಮುಂತಾದ ಗುಣಗಳಿಂದ ಭೂಷಿತವಾಗಿರಬೇಕು. ರಾಜನೆಂದರೆ ಭೋಗ ಜೀವಿಯಲ್ಲ; ಅವನು ತ್ಯಾಗಶೀಲ. ನಾಡಿನ ಹಿತಕ್ಕಾಗಿ ಅವನು ತನ್ನ ಸರ್ವಸ್ವವನ್ನೂ ಕೊಡಲು ಹಿಂದೆಗೆಯಬಾರದು. 'ಜನತಾ ಸೇವೆಯೇ ಜನಾರ್ದನ ಸೇವೆ' ಎಂಬ ಮನೋಭಾವದಿಂದ ರಾಜನು ನಿರಂತರವೂ ಜನಗಳ ಯೋಗಕ್ಷೇಮವನ್ನೇ ಚಿಂತಿಸುತ್ತಿರಬೇಕು. ರಾಜ್ಯ ರಥವನ್ನು ನಡಸುವುದರಲ್ಲಿ ರಾಜನು ಅಲಸನಾದರೆ, ಆ ರಥ ನಿಂತಲ್ಲಿಯೇ ನಿಂತೀತು! ರಾಜನಾಗಿ ಪ್ರಜಾರಕ್ಷಣೆಮಾಡಿ ದೇವರ ಪ್ರೀತಿಗೆ ಪಾತ್ರನಾಗಬೇಕು" ಎಂದು ಮುಂತಾಗಿ ಲಕ್ಷ್ಮಮ್ಮಣ್ಣಿಯವರು ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರಿಗೆ ಅನೇಕ ಸಂದರ್ಭಗಳಲ್ಲಿ ಹಿತೋಪದೇಶ ಮಾಡುತ್ತಿದ್ದರು. ಅವರು ಬೋಧಿಸುತ್ತಿದ್ದ ರಾಜನೀತಿ ಮಹಾರಾಜರ ಮನಸ್ಸಿಗೆ ಹಿಡಿದಿತ್ತು. ಒಡೆಯರು ಒಬ್ಬ ಆದರ್ಶ ಪ್ರಭುನಿಗೆ ತಕ್ಕ ರಾಜಕೀಯ ಶಿಕ್ಷಣವನ್ನು ಪಡೆದರು.

ಲಕ್ಷ್ಮಮ್ಮಣ್ಣಿಯವರು ದಿವಾನ್ ಪೂರ್ಣಯ್ಯನವರ ಪ್ರಭುಭಕ್ತಿಯನ್ನು ಕಂಡು ಮೆಚ್ಚಿದರು. ಅವರ ಕಾರ್ಯದಕ್ಷತೆಯನ್ನು ನೋಡಿ ಪ್ರಶಂಸಿಸಿದರು. ಪೂರ್ಣಯ್ಯನವರು ಸುಮಾರು ಹನ್ನೆರಡು ವರ್ಷಕಾಲ ಮೈಸೂರು ಸಂಸ್ಥಾನದ ದಿವಾನ್ ಪದವಿಯಲ್ಲಿದ್ದುಕೊಂಡು ಆಡಳಿತಗಳನ್ನು ನಿರ್ವಹಿಸಿ ಪ್ರಭು ಸೇವೆಯನ್ನು ನಿರ್ವಂಚನೆಯಿಂದ ಸಲ್ಲಿಸಿದರು. ಅವರು ಸಂಸ್ಥಾನಕ್ಕೆ ಮಾಡಿದ ಸೇವೆಯನ್ನು ಪರಿಗಣಿಸಿ, ಕಂಪೆನಿ ಸರ್ಕಾರದವರ ಅನುಮತಿಯಂತೆ ಮಹಾರಾಜರು ಪೂರ್ಣಯ್ಯನವರಿಗೆ ಯಳಂದೂರು ತಾಲ್ಲೂಕನ್ನು ಜಹಗೀರು ಮಾಡಿಕೊಟ್ಟರು. ಒಡೆಯರಿಗೆ ಹದಿನಾರು ವರ್ಷ ವಯಸ್ಸಾದಮೇಲೆ ಅವರು ರಾಜಕಾರ್ಯಗಳನ್ನು ತಾವೇ ಸ್ವತಃ ನಡೆಯಿಸಬೇಕೆಂಬ ಅಭಿಲಾಷೆಯನ್ನು ವ್ಯಕ್ತಪಡಿಸಿದರು. ಮಹಾರಾಜರು ಪೂರ್ಣಯ್ಯನವರ ಸೇವೆಯನ್ನು ಮೆಚ್ಚಿ

ಅವರಿಗೆ ವಿಶ್ರಾಂತಿ ಜೀವನವನ್ನು ಪಡೆಯಲು ಬಿಡುವು ಮಾಡಿಕೊಟ್ಟರ
ಅವರು ತಮ್ಮ ವಿಶ್ರಾಂತಿ ಜೀವನವನ್ನು ಶ್ರೀರಂಗಪಟ್ಟಣದಲ್ಲಿ ಕಳೆಯುತ್ತಿದ್ದರ
ಮಹಾರಾಜರು ಅವರಿಗೆ ತಿಂಗಳಿಗೆ ೫೦೦ ವರಹ ವಿಶ್ರಾಂತಿವೇತನವನ
ಕೊಡಿಸುತ್ತಿದ್ದರು. ಅವರು ಬಹಳ ಕಾಲ ಬದುಕಿರಲಿಲ್ಲ. ಮೂರು ತಿ
ಳೊಳಗಾಗಿಯೇ ವಿಧಿವಶರಾದರು! ಅವಸಾನ ಕಾಲದಲ್ಲಿ ಅವರಿಗೆ ೬೫ ವ
ವಯಸ್ಸು. ಒಡೆಯರು ಪೂರ್ಣಯ್ಯನವರ ಮರಣಕ್ಕಾಗಿ ವ್ಯಥೆಪಟ್ಟರ
ಅವರ ಕುಟುಂಬದವರಿಗೆ ತಮ್ಮ ಸಂತಾಪವನ್ನು ಸೂಚಿಸಿ, ಶ್ರೀರಂಗಪಟ್ಟ
ಕೋಟೆಯಲ್ಲಿದ್ದ ತಮ್ಮ ಅರಮನೆಯನ್ನು ಮೃತರ ಉತ್ತರಕ್ರಿಯೆಗಳು ನ
ಯುವ ಕಾಲದಲ್ಲಿ ಆ ಕುಟುಂಬದವರಿಗೆ ಬಿಟ್ಟುಕೊಟ್ಟು ಸಹಾಯ ಮಾಡಿದರ
ಪೂರ್ಣಯ್ಯನವರಿಗೆ ಸಲ್ಲುತ್ತಿದ್ದ ವಿರಾಮವೇತನವನ್ನು ಅವರ ಮಗ ಅನ
ರಾಯರೆಂಬುವರಿಗೆ ಅಪ್ಪಣೆ ಮಾಡಿದರು. ಅಲ್ಲಿಂದ ಮುಂದೆ ಮುಮ್ಮ
ಶ್ರೀ ಕೃಷ್ಣರಾಜ ಒಡೆಯರು ಸ್ವತಃ ರಾಜಕಾರ್ಯಗಳನ್ನು ನಡಸಲು ಪ್ರಾರಂ
ಸಿದರು.

ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರಿಗೆ ಆಗ ೫೮ ವರ್ಷ ವಯಸ್ಸು
ಆ ವೃದ್ಧಮಾತೆ ತನ್ನ ರಾಜನೀತಿ ಕೌಶಲ್ಯದಿಂದ ಒಡೆಯರನ್ನು ನಡಸುತ್ತ
ಮಾತೃವಾತ್ಸಲ್ಯದಿಂದ ನೋಡಿಕೊಂಡು ಕಾಲ ಕಳೆಯುತ್ತಿದ್ದರು. ಯ
ವಂಶದ ಕುಲದೇವತೆಯಾದ ಶ್ರೀ ಚಾಮುಂಡೇಶ್ವರೀ ದೇವಿಯ ಪೂಜಾಕಾರ
ಗಳಲ್ಲಿ ನಿರತರಾಗಿ ರಾಜಯೋಗಿಣಿಯಂತೆ ಇದ್ದರು. ಮಹಾರಾಜರೂ ತ
ಪಿತಾಮಹಿಯವರಲ್ಲಿ ಅತ್ಯಂತ ಭಕ್ತಿಗೌರವಗಳನ್ನಿಟ್ಟುಕೊಂಡಿದ್ದರು.

# ಅಧ್ಯಾಯ ೯

## ದೈವಭಕ್ತಿ ; ಧರ್ಮೋಜ್ಜೀವನ

ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ತಮ್ಮ ಮನೆ ದೇವತೆ ಶ್ರೀ ಚಾಮುಂಡೇಶ್ವರೀ ದೇವಿಯನ್ನು ಅನನ್ಯಭಕ್ತಿಯಿಂದ ಆರಾಧಿಸುತ್ತಿದ್ದರು. ಅವರ ಭಕ್ತಿಯೇ ಅವರ ಅಪಾರಶಕ್ತಿಯಾಯಿತು. ಅವರ ಅಂತರಂಗ ಪರಿಶುದ್ಧವಾಯಿತು; ಆತ್ಮಬಲ ಹೆಚ್ಚಿತು. ಭಕ್ತಿಯಿಂದ ಎಂಥ ದಾರುಣ ಪರಿಸ್ಥಿತಿಯನ್ನು ಬೇಕಾದರೂ ಧೈರ್ಯದಿಂದ ಎದುರಿಸಿ ಜಯಪ್ರದರಾಗಬಹುದು. ಆತ್ಮಶಕ್ತಿಯನ್ನು ಯಾವ ಶತ್ರುವೂ ಮುರಿಯಲಾರನು. ಅವರಿಗೆ ಸೈನ್ಯಬಲವಿರಲಿಲ್ಲ, ಅಸ್ತ್ರರೆಂಬುವರಿರಲಿಲ್ಲ. ಅವರಿಗಿದ್ದುದು ಭಕ್ತಿಯ ಬಲ. ಚಾಮುಂಡೇಶ್ವರಿಯ ಅನುಗ್ರಹ ಬಲ. ಅವರು ಕರ್ಮಯೋಗಿಣಿಯಂತೆ ಜೀವನ ತಪಸ್ಸನ್ನಾಚರಿಸಿದರು. ಪ್ರತಿದಿನವೂ ನಂಜನಗೂಡಿನಿಂದ ಶ್ರೀಕಂಠೇಶ್ವರನ ಪ್ರಸಾದ ಅರಮನೆಗೆ ಬರುತ್ತಿತ್ತು. ಅವರು ಭಕ್ತಿಯಿಂದ ಶ್ರೀ ಚಾಮುಂಡೇಶ್ವರಿಯನ್ನು ಪೂಜಿಸಿ, ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ ಮನಸ್ಸಿನ ಮೇಲೆ ಅವರು ಸತ್ಪರಿಣಾಮವನ್ನು ಬೀರುತ್ತಿದ್ದರು.

ಲಕ್ಷ್ಮಮ್ಮಣ್ಣಿಯವರ ಜೀವನದಲ್ಲಿ ಅಂಧಕಾರವಿದ್ದಾಗ ಅವರ ದೈವಭಕ್ತಿಯೇ ಅವರಿಗೆ ಕಣ್ಬೆಳಕಾಗುತ್ತಿತ್ತು. ಅವರಿಗೆ ಇನ್ನೂ ಚಿಕ್ಕ ವಯಸ್ಸಿನಲ್ಲಿಯೇ ಪತಿವಿಯೋಗವಾಯಿತು. ಅವರಿಗೆ ಪುತ್ರಸಂತಾನವಿರಲಿಲ್ಲ. ಅವರ ಸಪತ್ನಿಯರಿಗೆ ಮಾತ್ರ ನಂಜರಾಜ ಒಡೆಯರು ಮತ್ತು ಚಾಮರಾಜ ಒಡೆಯರು ಎಂಬ ಇಬ್ಬರು ಮಕ್ಕಳಿದ್ದರು. ಲಕ್ಷ್ಮಮ್ಮಣ್ಣಿಯವರು ಪತಿಯ ಕಾಲಾನಂತರ ನಂಜರಾಜ ಒಡೆಯರು ನಾಲ್ಕು ವರ್ಷವೂ ಅವರ ಸಹೋದರರು ಆರು ವರ್ಷವೂ ರಾಜ್ಯವಾಳಿ ದಿವಂಗತರಾದರು. ಹೀಗೆ ಪ್ರಿಯತಮನಾದ ಪತಿಯೂ ಪ್ರಾಣಾಧಿಕರಾದ ಪುತ್ರರೂ ಮೃತರಾದ ಬಳಿಕ, ರಾಣಿ ಲಕ್ಷ್ಮಮ್ಮಣ್ಣಿಯವರು ವಿಪತ್ಸಾಗರದಲ್ಲಿ ಮುಳುಗಿ ವ್ಯಸನದಿಂದ ಕೃಶರಾಗುತ್ತಿದ್ದರು ಇಂಥ ವಿಪತ್ಸಮ

ಯದಲ್ಲಿ ಅವರು ದೇವರನ್ನು ನಂಬಿ ನಿಶ್ಚಲ ಮನೋಭಾವದಿಂದ ಧ್ಯಾನಮಾಡುತ್ತಿದ್ದರು. ಅವರು ಕಷ್ಟಗಳನ್ನು ಸಹಿಸಿ ಸಹಿಸಿ ಪುಟ್ಟಕ್ಕಿಟ್ಟ ಚಿನ್ನದಂತೆ ಪರಿಶುದ್ಧರಾದರು. ಅವರು ದೇವರಲ್ಲಿ ಮೊರೆಯಿಟ್ಟು ತಮ್ಮ ದುಃಖಾಶ್ರುಗಳಿಂದ ದೇವಿಯ ಪಾದಗಳಿಗೆ ಅಭಿಷೇಕ ಮಾಡುತ್ತಿದ್ದರು. ಅವರ ಮನಸ್ಸು ದುಃಖಾಗ್ನಿಯಿಂದ ದಗ್ಧವಾಯಿತು. ಅವರಲ್ಲಿ ದೇಶಾಭಿಮಾನದ ತೇಜಸ್ಸು ಪ್ರಕಾಶಗೊಂಡಿತು. ಅವರು ಖಾಸಾ ಚಾಮರಾಜ ಒಡೆಯರನ್ನು ದತ್ತುಸ್ವೀಕಾರ ಮಾಡಿಕೊಂಡಮೇಲೆ ದುಃಖವನ್ನೆಲ್ಲ ನುಂಗಿಕೊಂಡು ಸ್ವಾತಂತ್ರ್ಯಸಾಧನೋಪಾಯವನ್ನು ಹುಡುಕಲಾರಂಭಿಸಿದರು. ಆಗ ಅವರಿಗಿದ್ದುದು ದೈವಬಲವೊಂದೇ. ಅವರು ಯಾವ ಕಾರ್ಯವನ್ನು ಮಾಡಬೇಕಾದರೂ ದೇವರ ಹೆಸರಿನಲ್ಲಿ ಮಾಡುತ್ತಿದ್ದರು. ಶ್ರೀರಂಗಪಟ್ಟಣದ ರಂಗನಾಥಸ್ವಾಮಿಯನ್ನು ಅವರು ನಂಬಿದ್ದರು. ಶತ್ರುನಿಗ್ರಹ ಮಾಡಲು ಆ ರಂಗಧಾಮನು ನಿದ್ರೆಯಿಂದ ಎಚ್ಚರವಾಗಬೇಕೆಂದು ಅವರು ಬೇಡಿಕೊಳ್ಳುತ್ತಿದ್ದರು. ದುಃಖದಿಂದ ಕಣ್ಣೀರು ಸುರಿಸುತ್ತಿದ್ದರು. ಅವರು ರಾಜಕಾರ್ಯ ಸಂಧಾನಪ್ರಯತ್ನಗಳನ್ನು ಕಂಪೆನಿ ಸರ್ಕಾರದವರೊಂದಿಗೆ ನಡಸುತ್ತಿದ್ದಾಗ, ಆ ಇಂಗ್ಲೀಷ್ ಸರದಾರರಿಗೆ ಬರೆದ ಪತ್ರದಲ್ಲಿ "ಇಂಗ್ಲಿಷ್ ಸೈನ್ಯವನ್ನು ಎದುರಿಸಲು ಸಮರ್ಥರಾದ ಸೇನಾನಾಯಕರೇ ಇಲ್ಲ. ಪ್ರತಿಯೊಬ್ಬರೂ ಟೀಪುವಿನ ಅವನತಿಯನ್ನೇ ನಿರೀಕ್ಷಿಸುತ್ತಿದ್ದಾರೆ. ನೀವು ನಿಮ್ಮ ಶಕ್ತಿಸಾಮರ್ಥ್ಯ ಮತ್ತು ಚಾತುರ್ಯಗಳನ್ನು ಉಪಯೋಗಿಸಿದ್ದೇ ಆದರೆ, ಶ್ರೀ ರಂಗನಾಥ ದೇವರು ನಮಗೆ ಸಹಾಯ ಮಾಡುತ್ತಾನೆ" ಎಂದು ಹೇಳಿದ್ದಾರೆ. ಅವರಿಗೆ ದೇವರಲ್ಲಿ ಅಚಲವಾದ ನಂಬುಗೆಯಿತ್ತು. ಯಾವ ಕಾರ್ಯವನ್ನಾದರೂ ದೈವಬಲದಿಂದ ನೆರವೇರಿಸಬಹುದೆಂದೇ ಅವರು ನಂಬಿದ್ದರು. ಆ ನಂಬುಗೆಯೇ ಅವರಿಗೆ ವಜ್ರಕವಚವಾಯಿತು. ರಕ್ಷಾಮಣಿಯಾಯಿತು.

ಪ್ರತಿವರ್ಷವೂ ಅವರು ಶ್ರೀರಂಗನಾಥಸ್ವಾಮಿಯ ರಥೋತ್ಸವ ಕಾಲದಲ್ಲಿ ಅರಮನೆಯಿಂದ ವಿಶೇಷ ಪೂಜೆಯನ್ನು ನಡೆಸುತ್ತಿದ್ದರು. ಶ್ರೀ ರಂಗನಾಥ ದೇವಾಲಯವನ್ನು ಜೀರ್ಣೋದ್ಧಾರಮಾಡಿಸಿ, ಬ್ರಾಹ್ಮಣ ವಿದ್ಯಾರ್ಥಿಗಳಿಗೆ ವೇದಾಧ್ಯಯನ ಮಾಡಿಸಲು ಸೌಕರ್ಯಗಳನ್ನು ಕಲ್ಪಿಸಿದರು. ವಿಕೃತಿ ಸಂವತ್ಸರದಲ್ಲಿ (ಕ್ರಿ. ಶ. ೧೭೭೦) ಶ್ರೀರಂಗಪಟ್ಟಣದಲ್ಲಿ ಶ್ರೀ ರಂಗನಾಥ

ಸ್ವಾಮಿಯ ರಥೋತ್ಸವ ನಡೆಯಿತು. ಎಂದಿನಂತೆ ಜನಗಳು ತಂಡೋಪ ತಂಡವಾಗಿ ಬಂದು ಸೇರಿದ್ದರು. ದೇವರಿಗೆ ಅಲಂಕಾರ ಮಾಡಿ ರಥಕ್ಕೆ ಬಿಜಯ ಮಾಡಿಸಿಕೊಂಡು ಬಂದರು. ಮಧ್ಯಾಹ್ನ ಸಮಯ. ಏನು ಅಚಾತುರ್ಯ ನಡೆಯಿತೋ ಏನೋ! ರಥಕ್ಕೆ ಬೆಂಕಿ ಹೊತ್ತಿಕೊಂಡು ಸ್ವಲ್ಪ ಹೊತ್ತಿನಲ್ಲಿಯೇ ಸುಟ್ಟು ಭಸ್ಮವಾಯಿತು. ರಥದಲ್ಲಿದ್ದ ಕಸ್ತೂರಿರಂಗನೆಂಬ ಉತ್ಸವವು ಕರಗಿ ನೀರಾಯಿತು! ಆ ಸಮಾಚಾರವನ್ನು ಕೇಳಿ ಲಕ್ಷ್ಮಮ್ಮಣ್ಣಿಯವರು ಕುಸಿದು ಬಿದ್ದರು. ಅವರು ಮೊದಲೇ ದುಃಖಭಾಜನರಾಗಿ ಪರಿತಪಿಸುತ್ತಿದ್ದರು. ತಾವು ನಂಬಿದ್ದ ಭಗವಂತನ ವಿಗ್ರಹ ಬೆಂಕಿಯಲ್ಲಿ ಸುಟ್ಟುಹೋಯಿತೆಂದು ಅವರು ಹಗಲಿರುಳೂ ಒಂದೇ ಸಮನೆ ಕಣ್ಣೀರಿಟ್ಟರು. ರಾಜ್ಯಕ್ಕೆ ಏನೋ ಅನಿಷ್ಟ ಪ್ರಾಪ್ತಿಯಾಗುತ್ತದೆಯೆಂದು ಶಂಕಿಸಿದರು. ಅವರು ಆಗ ಅರಮನೆ ಯಲ್ಲಿ ಪೂರ್ವದಿಂದಲೂ ಪೂಜೆಗೊಳ್ಳುತ್ತಿದ್ದ ಹುಚ್ಚರಂಗಸ್ವಾಮಿ ಎಂಬ ವಿಗ್ರಹವನ್ನು ದೇವಾಲಯಕ್ಕೆ ಕೊಟ್ಟು, ದೇವರಿಗೆ ಹೊಸದಾಗಿ ರಥವನ್ನು ಮಾಡಿಸಿಕೊಟ್ಟು ತಮ್ಮ ಭಕ್ತಿಕಾಣಿಕೆಯನ್ನು ಸಮರ್ಪಿಸಿದರು. ಮರು ವರ್ಷವೇ ಸಂಸ್ಥಾನದಲ್ಲಿ ವೀರಕ್ಷಾಮ ತಲೆದೋರಿತು. ತ್ರಿಯಂಬಕಮಾಮ ನೆಂಬ ಮರಾಟೆ ಸರದಾರನು ದೊಡ್ಡ ದಂಡಿನೊಡನೆ ಬಂದು ಮೈಸೂರು ಗಡಿಯಲ್ಲಿ ಯುದ್ಧ ಮಾಡಿದ್ದನು. ಅವನು ದೇಶದ ಒಳಪ್ರಾಂತಕ್ಕೆ ನುಗ್ಗಿ ಮೇಲುಕೋಟೆಯ ಹತ್ತಿರವಿರುವ ಚಿನಕುರುಳಿಯ ಬಳಿಯಲ್ಲಿ ಮೈಸೂರು ಸೈನ್ಯವನ್ನು ಎದುರಿಸಿದನು. ಅಲ್ಲಿಂದ ನುಗ್ಗಿ ಬಂದು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ಎರಡು ತಿಂಗಳ ಕಾಲ ಲಡಾಯಿ ಮಾಡಿ, ಕೊನೆಗೆ ಸೋತು ಹೋದನು. ಈ ಯುದ್ಧಗಳ ದೆಸೆಯಿಂದಲೂ, ಆ ವರ್ಷ ಮಳೆ ಸರಿಯಾಗಿ ಆಗದೆ ದೇಶದಲ್ಲಿ ಬೆಳೆ ಕೆಟ್ಟುಹೋದದ್ದರಿಂದಲೂ ದೇಶದಲ್ಲಿ ಬರಗಾಲ ಬಂತು, ಜನರು ಆಹಾರವಿಲ್ಲದೆ ಕಂಗೆಟ್ಟರು. ಇಂಥ ಪರಿಸ್ಥಿತಿಯಲ್ಲಿಯೇ ಶ್ರೀರಂಗ ಪಟ್ಟಣದಲ್ಲಿ ಮತ್ತೊಂದು ಅನಾಹುತವಾಯಿತು. ವೈಶಾಖಮಾಸ; ಉರಿ ಬಿಸಿಲು. ಮಧ್ಯಾಹ್ನ ಸಮಯಕ್ಕೆ ಅಕಸ್ಮಾತ್ತಾಗಿ ಬೆಂಕಿ ಬಿತ್ತು! ಆ ಬೆಂಕಿ ದೊಡ್ಡ ಉಗ್ರಾಣಕ್ಕೂ ತಗುಲಿತು. ಆಗ ಅರಮನೆಯ ಮತ್ತು ಪುರಜನರ ಅನೇಕ ವಸ್ತುಗಳೂ ಸುಟ್ಟುಹೋದುವು. ಉಗ್ರಾಣದಲ್ಲಿದ್ದ ಸಮಸ್ತ ಪಡಿಪದಾರ್ಥಗಳು ಬೆಂದು ಕರಿಕರಿಯಾದುವು. ಪ್ರಾಣಹಾನಿಯೂ ಆಯಿತು. ರಂಗನಾಥ

ಸ್ವಾಮಿ ದೇವಸ್ಥಾನದ ಮುಚ್ಚಳದ ಕಲ್ಲು ಸಿಡಿದುಬಿದ್ದು ಮೇಲ್ಛಾವಣಿಯೆಲ್ಲ
ನೆಲಕ್ಕೆ ಉರುಳಿತು. ಆಗ ಹೈದರಾಲಿಯು ಕೊಡಗು ಸೀಮೆಯನ್ನು ಸಾಧಿಸಲು
ಹೋಗಿದ್ದನು. ಲಕ್ಷ್ಮಮ್ಮಣ್ಣಿಯವರು ತಮ್ಮ ಕುಮಾರರಾದ ಬೆಟ್ಟದ ಚಾಮ
ರಾಜಒಡೆಯರಿಗೆ ಧೈರ್ಯ ಹೇಳಿಕೊಂಡು, ಕಷ್ಟನಷ್ಟಗಳಿಗೆ ಒಳಗಾದ ಪ್ರಜೆ
ಗಳಿಗೆ ಪರಿಹಾರಗಳನ್ನು ಕಲ್ಪಿಸಿಕೊಟ್ಟು, ರಂಗನಾಥಸ್ವಾಮಿಯ ದೇವಾಲಯ
ವನ್ನು ಜೀರ್ಣೋದ್ಧಾರ ಮಾಡಿಸಿದರು. ಲಕ್ಷ್ಮಮ್ಮಣ್ಣಿಯವರು ಪ್ರಜೆಗಳಿಗೆ
ಒದಗಿದ ದುಃಖಸ್ಥಿತಿಯನ್ನು ಕಂಡು ಬಹಳವಾಗಿ ವ್ಯಥೆಪಟ್ಟರು. ತಮ್ಮ
ಕೈಯಾರೆ ಪ್ರಜಾಸಮುದಾಯಕ್ಕೆ ಸಹಾಯಮಾಡಿ, ಅನ್ನ ವಸ್ತ್ರಗಳನ್ನು
ಯಥೇಚ್ಛವಾಗಿ ಕೊಟ್ಟು ಅವರ ದುಃಖ ಶಮನಮಾಡಲು ಅವರಿಗೆ ಯಾವು
ದೊಂದು ಸ್ವಾತಂತ್ರ್ಯವೂ ಇರಲಿಲ್ಲ. ತಮ್ಮ ಶಕ್ತಿಯಲ್ಲಿದ್ದುದನ್ನು ಅವರು
ನಿರ್ವಂಚನೆಯಿಂದ ಪ್ರಜೋಪಕಾರ ಕಾರ್ಯಗಳಿಗೆ ಸಲ್ಲಿಸಿದರು. ದೇಶದಲ್ಲಿ
ಕ್ಷಾಮ ಭೀತಿಯು ತಪ್ಪಿ, ಜನರು ನೆಮ್ಮದಿಯಾಗಿ ಜೀವನಮಾಡುವಷ್ಟು
ಅನುಕೂಲವಾಗುವಂತೆ ಮಳೆಬೆಳೆಗಳಾಗುವವರೆಗೂ ಅವರು ಒಪ್ಪತ್ತುಮಾತ್ರವೇ
ಊಟ ಮಾಡುತ್ತಿದ್ದರು. ಜನರ ಕಷ್ಟವೇ ತಮ್ಮ ಕಷ್ಟವೆಂದು ಚಿಂತಿಸು
ತ್ತಿದ್ದರು. ಅರಮನೆಯಲ್ಲಿ ಖಾಸಾ ಉಗ್ರಾಣವಲ್ಲಿದ್ದ ಪಡಿಪದಾರ್ಥಗಳನ್ನೂ
ಪ್ರತಿದಿನವೂ ಬಡವರಿಗೂ ನಿರಾಶ್ರಿತರಿಗೂ ದಾನಮಾಡಿ ಅವರ ಹಸಿವನ್ನು
ಹಿಂಗಿಸಿದರು. ಮಕ್ಕಳಿಗೆ ಪ್ರತಿದಿನವೂ ಅರಮನೆಯಿಂದ ಹಾಲು ಕೊಡಿಸು
ತ್ತಿದ್ದರು. ಮರುವರ್ಷ ಮಳೆ ವಿಶೇಷವಾಗಿ ಬಿತ್ತು. ಎಲ್ಲೆಲ್ಲೂ ಕೆರೆಕಟ್ಟೆಗಳು
ತುಂಬಿದುವು. ಕೈತುಂಬ ಬೆಳೆ ಬಂತು. ಜನರಿಗೆ ಸುಖದ ಕಾಲ ಬಂತು.
ಆದರೆ ಲಕ್ಷ್ಮಮ್ಮಣ್ಣಿಯವರಿಗೆ ದುಃಖವಿಮೋಚನೆಯಾಗಿರಲಿಲ್ಲ! ನವಾಬನ
ಪ್ರಾಬಲ್ಯದಿಂದ ಮೈಸೂರು ಸಂಸ್ಥಾನವನ್ನು ತಪ್ಪಿಸಿ ಪ್ರಭುವಂಶದವರ ಕೈಗೆ
ರಾಜ್ಯವನ್ನು ವಹಿಸಿಕೊಟ್ಟರೆ ತಮಗೆ ಸಮಾಧಾನವೆಂದು ಅವರು ತಿಳಿದಿದ್ದರು.
ಅವರು ಸ್ವಾತಂತ್ರ್ಯದೇವಿಯನ್ನು ಆರಾಧಿಸುತ್ತಿದ್ದರು. ಅವರು ವೀರಾಂಗನೆ
ಯಾಗಿದ್ದಂತೆಯೇ ಧರ್ಮಭೀರುವಾಗಿದ್ದರು. ಅವರು ಧರ್ಮಯುದ್ಧವನ್ನು
ಹೂಡಿದ್ದರು. ದೇವರ ಅನುಗ್ರಹದಿಂದ ಮಾತ್ರವೇ ಅವರು ಕೃತಕಾರ್ಯರಾಗ
ಬೇಕಾಗಿತ್ತು. ಇತಿಹಾಸದಲ್ಲಿ ಚಾಣಕ್ಯ, ವಿದ್ಯಾರಣ್ಯರಂಥ ರಾಷ್ಟ್ರಪುರುಷರು
ಸ್ವದೇಶೋದ್ಧಾರ ಕಾರ್ಯದಲ್ಲಿ ಬದ್ಧಕಂಕಣರಾಗಿ ದುಡಿದರು. ಅವರ

ಬ್ರಾಹ್ಮಣರಾದರೂ, ಕ್ಷತ್ರಿಯ ಬಲವನ್ನು ಅನುಗೊಳಿಸಿ ಜನರಲ್ಲಿ ಬೆರೆತು, ಸಮಯವರಿತು ಕಾರ್ಯಮಾಡಲು ಅವಕಾಶವಿತ್ತು. ಲಕ್ಷ್ಮಮ್ಮಣ್ಣಿಯವರು ತೆರೆಮರೆಯ ಹೆಂಗಸು; ಜನರಲ್ಲಿ ಬೆರೆಯಲು ಅವಕಾಶವಿರಲಿಲ್ಲ. ಯಾವುದೊಂದು ಕ್ಷತ್ರಿಯಬಲವನ್ನೂ ಅನುಗೊಳಿಸಿಕೊಳ್ಳಲು ಅವರಿಗೆ ಸಾಧ್ಯವಿರಲಿಲ್ಲ. ಹಿತಶತ್ರುವಿನ ನಿರ್ಬಂಧವನ್ನು ಬಿಟ್ಟು ಹೊರಗೆ ಬರುವಂತಿರಲಿಲ್ಲ. ಇದ್ದ ಕಡೆಯಿಂದಲೇ ಅವರು ಸ್ವಾತಂತ್ರ್ಯಸಾಧನೆ ಮಾಡಬೇಕಾಗಿತ್ತು. ಅದಕ್ಕಾಗಿ ಅವರು ದೇವರ ಸಹಾಯವನ್ನು ನಿರೀಕ್ಷಿಸುತ್ತಿದ್ದರು. ಚಾಣಕ್ಯನ ಬುದ್ಧಿಶಕ್ತಿ, ವಿದ್ಯಾರಣ್ಯರ ಕರ್ತೃತ್ವಶಕ್ತಿ ಇವು ಲಕ್ಷ್ಮಮ್ಮಣ್ಣಿಯವರಲ್ಲಿದ್ದುವು. ಅವರು ತಮ್ಮ ಬುದ್ಧಿಶಕ್ತಿಯನ್ನುಪಯೋಗಿಸಿ, ಕರ್ತೃತ್ವಶಕ್ತಿಯನ್ನೂ ಅಳವಡಿಸಿ ಕಾರ್ಯಸಾಧನೆ ಮಾಡಲು ತಕ್ಕ ಸನ್ನಿವೇಶಗಳನ್ನು ಕಲ್ಪಿಸಿಕೊಡಬೇಕೆಂದು ದೇವರಲ್ಲಿ ಮೊರೆಯಿಡುತ್ತಿದ್ದರು. ಹೈದರನ ಪಾಶವೀಶಕ್ತಿ ಪಂಜರದಲ್ಲಿ ಸೆರೆಬಿದ್ದ ಸಿಂಹಿಣಿಯಂತೆ ಅವರು ತಮ್ಮ ಶಕ್ತಿಯನ್ನು ಅಡಗಿಸಿಕೊಂಡಿದ್ದರು. ಸುತ್ತಲೂ ಜೀವನವೆಲ್ಲ ಅಂಧಕಾರಮಯವಾಗಿ ಕಾಣುತ್ತಿತ್ತು. ಆ ಅಂಧಕಾರದಲ್ಲಿ ಅವರಿಗೆ ಕಾಣುತ್ತಿದ್ದುದು ದೈವಭಕ್ತಿಯ ಬೆಳಕು! ಆತ್ಮ ಸಂಯಮದ ಅನಂತಶಕ್ತಿ !

ಹೈದರನು ಮೈಸೂರು ಸಂಸ್ಥಾನವನ್ನು ರಾಮೇಶ್ವರದಿಂದ ಹಿಡಿದು ಕೃಷ್ಣಾನದಿಯವರೆಗೂ ವಿಸ್ತರಿಸಿದನು. ಅನೇಕ ಶತ್ರುಗಳನ್ನು ಮರ್ದನ ಮಾಡಿದನು. ಇಂಗ್ಲಿಷರಂಥ ಸರ್ವಶಕ್ತರನ್ನೂ ನಡುಗಿಸಿದನು. ಆದರೇನು! ಕ್ಷತ್ರಿಯ ರಮಣಿ ಲಕ್ಷ್ಮಮ್ಮಣ್ಣಿಯವರನ್ನು ಅವನು ಜಯಿಸಲಿಲ್ಲ! ಅವರ ಆತ್ಮಬಲವನ್ನು ಮುರಿಯಲು ಅವನ ಸೈನ್ಯ ಬಲದಿಂದ ಸಾಧ್ಯವಾಗಲಿಲ್ಲ! ಅವರು ಪ್ರತ್ಯಕ್ಷ ಚಾಮುಂಡಿಯಂತೆ ಹೈದರನ ಪಾಲಿಗೆ ಮೃತ್ಯುಸ್ವರೂಪರಾಗಿ ನಿಂತಿದ್ದರೆಂಬುದನ್ನು ಅವನೇನು ಬಲ್ಲನು! ಅವರು ಸಕಲ ಶಕ್ತಿಸ್ವರೂಪಿಣಿಯಾದ ಚಾಮುಂಡೇಶ್ವರಿಯನ್ನು ಧ್ಯಾನಿಸಿ, ಭಜಿಸಿ, ಪೂಜಿಸಿ ಆ ದೇವಿಯ ಅಪರಾವತಾರವೇ ತಾವಾಗಿ ಕಾಣುತ್ತಿದ್ದರು. ಆ ಮಹಾದೇವಿಯ ಸ್ವರೂಪವನ್ನು ತಮ್ಮ ಮನಸ್ಸಿನಲ್ಲಿಯೇ ಪರಿಭಾವಿಸಿಕೊಂಡು ತಮಗೂ ತಮ್ಮ ರಾಜಮನೆತನಕ್ಕೂ ಒದಗಿದ್ದ ಪರಿಸ್ಥಿತಿಯನ್ನು ನೋಡಿ ಜ್ವಾಲಾಮಾಲಿನಿಯಂತೆ ಕಿಡಿಕಿಡಿಯಾಗುತ್ತಿದ್ದರು! ಏನಾದರೇನು! ಅವರ ಪತಿಯ ಮರಣಾನಂತರ

ರಾಜ್ಯಕ್ಕೆ ಬಂದ ತಮ್ಮ ಸವತಿಯ ಮಕ್ಕಳು ಸಂಜರಾಜ ಒಡೆಯರಾಗ
ಅಥವಾ ಬೆಟ್ಟದ ಚಾಮರಾಜ ಒಡೆಯರಾಗಲಿ ಸಮರ್ಥರಾಗಿರಲಿಲ್ಲ! ಅವ
ಹೈದರನನ್ನು ದುರ್ಲಕ್ಷಿಸಿ, ಕಾರ್ಯಸಾಧನೆ ಮಾಡುವಷ್ಟು ಪ್ರಬಲರಾಗಿರಲಿ
ಅಲ್ಲದೆ, ಲಕ್ಷ್ಮಮ್ಮಣ್ಣಿಯವರಲ್ಲಿ ಸಹಕರಿಸಿ ಸ್ವಾತಂತ್ರ್ಯೋದ್ಯಮದಲ್ಲಿ ಕಾಯ
ಸಂಧಾನ ಮಾಡುವಷ್ಟು ನಿಪುಣರೂ ಆಗಿರಲಿಲ್ಲ! ಆದ್ದರಿಂದ ಅವರೊಬ್ಬ
ಸ್ವಾತಂತ್ರ್ಯ ಮಣಿದೀಪವನ್ನು ರಾಜ್ಯದಲ್ಲಿ ಬೆಳಗಿಸಬೇಕಾಗಿತ್ತು. ಆ ದೀ
ವನ್ನು ಉರಿಸಲು ದೈವಭಕ್ತಿಯೆಂಬ ತೈಲವೂ ಇತ್ತು; ದೇಶಾಭಿಮಾನವೆಂ
ಬತ್ತಿಯೂ ಇತ್ತು. ಅದನ್ನು ಹೊತ್ತಿಸಲು ಕ್ಷಾತ್ರತೇಜಸ್ಸೆಂಬ ಅಗ್ನಿಯ
ಸಿದ್ಧವಾಗಿತ್ತು! ಸಮಯವರಿತು ಆ ದೀಪವನ್ನು ಹೊತ್ತಿಸಲು ಲಕ್ಷ್ಮಿಮ್ಮ
ಯವರು ಸಂಧಾನಚತುರರಾಗಿ ವರ್ತಿಸುತ್ತಿದ್ದರು!

ಲಕ್ಷ್ಮಮ್ಮಣ್ಣಿಯವರು ರಾಜವನಿತೆಯಾಗಿ ರಾಜಭೋಗವನ್ನು ಅ
ಭವಿಸಲಿಲ್ಲ. ಅವರು ತಮಗಾಗಿ ದುಡಿದವರಲ್ಲ. ತಮ್ಮ ಹೊಟ್ಟೆಯ
ಹುಟ್ಟಿದ ಮಕ್ಕಳು ರಾಜ್ಯವಾಳುವರೆಂಬ ಆಶೆಯಂತೂ ಅವರಿಗಿರಲಿಲ್ಲ. ಆದ
ಅವರು ಪ್ರಸಿದ್ಧ ರಾಜಮನೆತನವನ್ನು ನೆಟ್ಟಗೆ ನಿಲ್ಲಿಸಬೇಕೆಂದು ಮಾತ್ರ ಸಾಹ
ಪಟ್ಟರು; ಕಷ್ಟಪಟ್ಟರು. ಅವರೇನಾದರೂ ಆಗ ಕ್ರಾಂತಿಕಾರಕರಾಗಿ ನಿ
ದಿದ್ದರೆ, ಇಂದು ಮೈಸೂರು ನಾಡಿನ ಸಂಸ್ಕೃತಿಯೇ ಉಳಿಯುತ್ತಿರಲಿಲ್ಲ! ಅವ
ಭಕ್ತಿ, ಸಂನ್ಯಾಸಿಯ ದೈನ್ಯಭಕ್ತಿಯಲ್ಲ! ಕ್ಷತ್ರಿಯ ಸಹಜವಾದ ಅರ್ಜುನ
ವೀರಭಕ್ತಿ! ಮೂಗು ಹಿಡಿದುಕೊಂಡು ತನ್ನ ಮೋಕ್ಷಕ್ಕಾಗಿ ಕಾಡಿನಲ್ಲಿ ಕುಳಿ
ಧ್ಯಾನ್ಯಮಾಡುವ ಮುನಿಭಕ್ತಿಯಲ್ಲ! ಸ್ವಾತಂತ್ರ್ಯವನ್ನು ನೀಗಿಕೊಂಡು ದಿಕ
ಗೆಟ್ಟಿದ್ದ ನಾಡನ್ನೂ. ಆ ನಾಡಿನ ರಾಜವಂಶವನ್ನೂ ಪುನರುಜ್ಜೀವನಗೊಳಿಸ
ಸಾಹಸ ಮಾಡುವ ರಾಷ್ಟ್ರಭಕ್ತಿ! ಅವರು ಶ್ರದ್ಧಾಸಕ್ತಿಯಿಂದ, ನಿಸ್ವಾ
ಬುದ್ಧಿಯಿಂದ ಭಕ್ತಿಯೋಗವನ್ನು ಮಾಡಿದರು.

ಅವರು ಜಯಾಪಜಯಗಳನ್ನು ಪರಿಗಣಿಸಿ ತಮ್ಮ ಕರ್ತವ್ಯದಿ
ಪರಾಙ್ಮುಖರಾದವರಲ್ಲ. ತಮ್ಮ ಮನಸ್ಸಂಕಲ್ಪ ನೆರವೇರುತ್ತದೆ ಎಂಬ ದೃ
ಮನಸ್ಸು ಅವರದು. ತಮ್ಮ ಪತಿ ಇಮ್ಮಡಿ ಕೃಷ್ಣರಾಜ ಒಡೆಯರು ಕಾಲವಾ
ಮೇಲೆ ಮೈಸೂರಿನ ಭಾಗ್ಯ ಸೂರ್ಯನು ಅಸ್ತಂಗತನಾದನೆಂದು ಪ್ರಜೆಗ
ದುಃಖಿಸಿದರು. ಅವರ ಜೀವಿತಾಕಾಶದಲ್ಲಿ ಕಾರ್ಮೋಡಗಳು ಕವಿದು

ಸರ್ವನಾಶವಾದಂತೆ ತೋರಿತು. ರಾಜ್ಯ ಅನ್ಯಾಕ್ರಾಂತವಾಗಿತ್ತು. ಅವರಿಗೆ ಆಗ ೨೪ ವರ್ಷ ವಯಸ್ಸು! ಜಗತ್ತೆಲ್ಲ ಅವರಿಗೆ ಶೂನ್ಯವಾಗಿ ಕಂಡುಬಂತು! ಆಗ ಅವರು ಭಕ್ತಿಯಿಂದ ಶ್ರೀ ಚಾಮುಂಡೇಶ್ವರಿಯನ್ನು ನಂಬಿದರು. ಅದರಿಂದ ಅವರಲ್ಲಿ ಆತ್ಮಶಕ್ತಿ ಬೆಳೆಯಿತು. ಶ್ರೀ ವಿದ್ಯಾರಣ್ಯರು ಭುವನೇಶ್ವರಿಯನ್ನು ಭಕ್ತಿಯಿಂದ ಆರಾಧಿಸಿ ಆತ್ಮಶಕ್ತಿಯನ್ನು ಪಡೆದು ಜನಶಕ್ತಿಯನ್ನು ಸಂಘಟಿಸಿ, ಸ್ವಾತಂತ್ರ್ಯ ಜ್ಯೋತಿಯನ್ನು ಹೊತ್ತಿಸಲಿಲ್ಲವೆ!

ಅವರು ಇಂಗ್ಲೀಷರೊಂದಿಗೆ ಸಂಧಾನ ಮಾಡಿದುದು ಸಾಮಾನ್ಯ ಕಾರ್ಯವಲ್ಲ. ವೀರ ಸ್ತ್ರೀಯಂತೆ ಮರಣವನ್ನು ಹೊಂದಬೇಕೆಂಬ ಅವರ ಧ್ಯೇಯವನ್ನು ಅಲ್ಲಾಡಿಸಲು ಆಸುರೀಶಕ್ತಿಗೆ ಸಾಧ್ಯವಾಗಲಿಲ್ಲ! ಶಕ್ತಿಸಾಹಸಗಳಿಂದ ಅವರು ವೀರಾಂಗನೆಯಂತೆ 'ಸತ್ತರೆ ಸ್ವರ್ಗ, ಬದುಕಿದರೆ ರಾಜ್ಯ' ಎಂಬ ಭಾವನೆಯಿಂದ ಕರ್ಮಯೋಗಾಸಕ್ತರಾಗಿದ್ದರು. ಅವರ ಕ್ಷಾತ್ರತೇಜಸ್ಸಿಗೆ ದೈವಭಕ್ತಿ ಅಂತಶ್ಶಕ್ತಿಯಾಗಿತ್ತು. ಅದರಿಂದಲೇ ಅವರು ರಾಜವಂಶದ ಪುಣ್ಯ ದೇವತೆಯೆಂದು ಹೇಳಿಸಿಕೊಂಡರು.

ಅವರಲ್ಲಿ ದೈವಭಕ್ತಿಯಿದ್ದಂತೆಯೇ ದೇಶಭಕ್ತಿ ತುಂಬಿತ್ತು. ದೇಶಪ್ರೇಮಕ್ಕಾಗಿ ಅವರು ಜೀವನವನ್ನು ಧಾರೆಯೆರೆಯಲು ಹಿಂಜರಿಯಲಿಲ್ಲ. ಶತ್ರು ಜಯಕ್ಕೆ ಸಿದ್ಧರಾದರು. ಒಳಗಿನ ಮತ್ತು ಹೊರಗಿನ ಶತ್ರುಗಳನ್ನು ಜಯಿಸಲು ಭಕ್ತಿಯೇ ತಕ್ಕ ಶಕ್ತಿ: ಅದರಿಂದ ಪರದಾಸ್ಯ ವಿಮುಕ್ತಿ! ಎಂಬುದನ್ನು ಅವರು ಮನಗಂಡಿದ್ದರು.

ಲಕ್ಷ್ಮಮ್ಮಣ್ಣಿಯವರು ಆತ್ಮಯಜ್ಞವನ್ನು ಮಾಡಿದ ಆತ್ಮಸಂಯಮಿಗಳು. ಲೋಕದ ಕ್ಷೇಮಚಿಂತನೆಯೇ ಅವರ ಪರಮಧ್ಯಾನವಾಯಿತು. ಹಿಂದೂ ರಾಜ್ಯದಲ್ಲಿ ಹಿಂದೂ ಸಂಸ್ಕೃತಿಯು ಅಳಿಗಾಲ ಒದಗಿದ್ದಾಗ ಆ ಆತ್ಮ ಧರ್ಮೋದ್ಧಾರಕ್ಕಾಗಿ ಹಾತೊರೆಯುತ್ತಿತ್ತು. ಆ ಸಂಸ್ಕೃತಿಯ ರಕ್ಷಣೆಯಾಗಬೇಕಾದರೆ ರಾಜಶಕ್ತಿ ಪ್ರಬಲವಾಗಿರಬೇಕು. ಅಂಥ ರಾಜಶಕ್ತಿ ಕುಂದಿದೆಯೆಂಬುದನ್ನು ತಿಳಿದು ಲಕ್ಷ್ಮಮ್ಮಣ್ಣಿಯವರು ತಮ್ಮ ಉದ್ದೇಶ ಸಾಧನೆಗಾಗಿ ದುಡಿದರು. ಹಿಂದೆ ರಾಜಸೂಯ ಯಾಗವನ್ನು ಮಾಡಿದ ರಾಜರಿದ್ದಂತೆ! ಅಶ್ವಮೇಧ ಯಾಗವನ್ನು ಮಾಡಿದ ಪ್ರಭುಗಳಿದ್ದಂತೆ! ಆತ್ಮಯಜ್ಞ ಮಾಡಿದ ಭೂಪಾಲರು ಅತಿ ವಿರಳ. ಸೂರ್ಯದೇವನು ಪ್ರತಿದಿನವೂ ಉದಯಿಸಿ, ಅಸ್ತಮಿಸಿ ಲೋಕ

ಹಿತವನ್ನು ಸಾಧಿಸುತ್ತಿದ್ದಾನೆ. ಇದು ಸೃಷ್ಟಿನಿಯಮ, ಇದೇ ಆತ್ಮಯಜ್ಞ. ಸೂರ್ಯನ ಉದಯದಿಂದ ಶಾಖೋತ್ಪತ್ತಿಯಾಗಿ ಸಸ್ಯ ಸಂಪತ್ತು ವರ್ಧಿಸುತ್ತದೆ. ಜಲರಾಶಿಯು ಕಾದು ಆವಿಯಾಗಿ ಮೋಡ ಕಟ್ಟಿ ಯಥೇಚ್ಛವಾಗಿ ಮಳೆ ಸುರಿಯುತ್ತದೆ. ಇದರಿಂದ ಲೋಕಕ್ಷೇಮವಾಗುತ್ತದೆ. ಸೂರ್ಯನಿಗೆ ಯಾವ ಪ್ರತಿಫಲವೂ ಕಾಣುವುದಿಲ್ಲ. ಅದರಂತೆಯೇ, ಲಕ್ಷ್ಮಮ್ಮಣ್ಣಿಯವರು ನೆಮ್ಮದಿಯಾಗಿರಲು ಇದ್ದುದರಲ್ಲಿಯೇ ಅವಕಾಶವಿತ್ತು. ಆದರೆ, ತಮ್ಮ ವಂಶೀಯರ ಕೈತಪ್ಪಿದ ರಾಜ್ಯವನ್ನು ಮತ್ತೆಗಳಿಸಲು ದೈವೀಶಕ್ತಿಯನ್ನು ಆರ್ಜಿಸಿದರು. ಫಲವೃಕ್ಷಗಳು ಬಿಸಿಲಿನಲ್ಲಿ ನಿಂತು, ಮಳೆಯಲ್ಲಿ ನೆನೆಲು ಲೋಕಹಿತವನ್ನು ಮಾಡುವಂತೆಯೇ ಅವರು ಆತ್ಮ ಸುಖವನ್ನು ತೃಣೀಕರಿಸಿ, ಆತ್ಮ ಯಜ್ಞವನ್ನು ಮಾಡಿದರು. ಅವರು ನಿರ್ಬಂಧದಲ್ಲಿದ್ದ ಮನೆಯೇ ಅವರ ಯಾಗಭೂಮಿಯಾಯಿತು! ಅವರ ನಿತ್ಯ ಜೀವನವೇ ತಪೋಮಯವಾಯಿತು! ಕೊನೆಗೆ, ಅವರ ಯಜ್ಞ ಫಲ ಕೈಸೇರಿತು. ರತ್ನ ಸಿಂಹಾಸನದಮೇಲೆ ತಮ್ಮ ಸಂತಾನ ಮೆರೆಯುವಂತಾಯಿತು! ಇದು ಅವರ ದೈವಭಕ್ತಿಯ ಫಲ! ಆತ್ಮಜ್ಞರ ಸತ್ಫಲ!

ಲಕ್ಷ್ಮಮ್ಮಣ್ಣಿಯವರು ದೈವಭಕ್ತರಾಗಿದ್ದಂತೆಯೇ ಗುರುಭಕ್ತಿ ಸಂಪನ್ನೆಯರಾಗಿದ್ದರು. ಶೃಂಗೇರಿ, ಅಹೋಬಲ ಮಠಗಳ ಗುರುಗಳಲ್ಲಿ ಅವರಿಗೆ ಪರಮ ಭಕ್ತಿಯಿತ್ತು. ಸೋಸಲೆ ಮಠದ ಗುರುಗಳಿಗೆ ವಿಶೇಷ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಎಲ್ಲ ಮಠಗಳಲ್ಲಿಯೂ ರಾಜವಂಶದ ಶ್ರೇಯಸ್ಸಾಧನೆಗಾಗಿ ಜಪತಪ ಹೋಮಗಳು ನಡೆಯುತ್ತಿದ್ದುವು. ಮಹಾಮಾತೃಶ್ರೀಯವರು ರಾಜ್ಯದಲ್ಲಿ ಸನಾತನ ಧರ್ಮ ಜ್ಯೋತಿಯನ್ನು ಬೆಳಗಿಸಲು ನಾನಾ ವಿಧವಾದ ಸೌಕರ್ಯಗಳನ್ನು ಕಲ್ಪಿಸಿಕೊಟ್ಟರು. ನವಾಬರೇ ಸರ್ವಾಧಿಕಾರಿಗಳಾಗಿದ್ದರೂ ಅವರು ಅರಮನೆಯಲ್ಲಿ ನಡೆಯಬೇಕಾದ ಸಂಪ್ರದಾಯಗಳಿಗೆ ಅಡ್ಡಿ ಬರಲಿಲ್ಲ. ಹಬ್ಬ ಹರಿವಾಸರಗಳಿಗೆ ಆತಂಕವಾಗಲಿಲ್ಲ. ಮುಂದೆ ಮೈಸೂರು ದೇಶ ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಿ ಜಗನ್ಮಾನ್ಯವಾಗಲು ಲಕ್ಷ್ಮಮ್ಮಣ್ಣಿಯವರ ಭಕ್ತಿಯೋಗವೇ ಮುಖ್ಯ ಕಾರಣ!

## ಅಧ್ಯಾಯ ೧೦

### ರತ್ನಸಿಂಹಾಸನ ; ರಂಗನಾಥ ಸಂದರ್ಶನ.

ಮೈಸೂರು ಪ್ರಭು ಪುಂಗವರು ಅಲಂಕರಿಸಿರುವ ರತ್ನಸಿಂಹಾಸನ ಅತ್ಯಂತ ಪವಿತ್ರವಾದುದು ; ಅತಿ ಪ್ರಾಚೀನವಾದುದು. ನವಾಬರು ಮೈಸೂರು ರಾಜ್ಯದ ಸರ್ವಾಧಿಕಾರಿಗಳಾಗಿದ್ದ ಕಾಲದಲ್ಲಿ ಮೈಸೂರು ಒಡೆಯರು ರತ್ನಸಿಂಹಾಸನಾಧೀಶ್ವರರಾಗಿದ್ದರೂ, ಟೀಪೂಸುಲ್ತಾನನು ರತ್ನಸಿಂಹಾಸನದಂತೆಯೇ ಇದ್ದ ಮಯೂರಾಸನವನ್ನು ಮಾಡಿಸಿಕೊಂಡು ಅದರ ಮೇಲೆ ಕುಳಿತುಕೊಂಡು ದರ್ಬಾರು ಮಾಡುತ್ತಿದ್ದನು. ಲಕ್ಷ್ಮಮ್ಮಣ್ಣಿಯವರು ಆ ಪರಿಸ್ಥಿತಿಯನ್ನು ಕಂಡು ಮರುಗುತ್ತಿದ್ದರು. ಈ ಸಿಂಹಾಸನದ ಪವಿತ್ರತೆಯನ್ನು ಕಾಪಾಡಿ, ತಮ್ಮ ರಾಜ ಸಂತಾನವನ್ನು ಪುನಃ ಪ್ರತಿಷ್ಠೆಗೊಳಿಸಲು ಆ ಮಹಾ ತಾಯಿ ಅತ್ಯಂತ ಕಷ್ಟಪಟ್ಟರು. ಈ ಸಿಂಹಾಸನದ ಚರಿತ್ರೆ ಪ್ರಸಿದ್ಧವಾಗಿದೆ.

ಹಿಂದೆ ಚಂದ್ರವಂಶದ ದೊರೆಗಳಾದ ಪಾಂಡವರು ಹಸ್ತಿನಾವತಿಯಲ್ಲಿ ರಾಜ್ಯಭಾರ ಮಾಡುತ್ತಿದ್ದರು. ಅವರ ಕಥೆಯನ್ನು ಮಹಾಭಾರತದಲ್ಲಿ ಹೇಳಿದೆ. ಸತ್ಯವಂತನಾದ ಧರ್ಮರಾಯನು ಈ ಸಿಂಹಾನದಮೇಲೆ ಮಂಡಿಸುತ್ತಿದ್ದನೆಂದು ತಿಳಿದುಬರುತ್ತದೆ. ಧರ್ಮರಾಯನ ಅನಂತರ ಅವನ ಮೊಮ್ಮಗನಾದ ಪರೀಕ್ಷಿತ ರಾಯನು ರಾಜ್ಯವಾಳಿದನು. ಅವನೂ ಈ ಸಿಂಹಾಸನದಮೇಲೆ ಮಂಡಿಸುತ್ತಿದ್ದನು.

ಅನಂತರ ಈ ಸಿಂಹಾಸನವು ಕಾಲಕ್ರಮದಲ್ಲಿ ಮಗಧ ದೇಶದ ಅರಸುಗಳ ಕೈಸೇರಿತು. ಆಗ ಕದಂಬ ವಂಶದ ಸುಮಾಲಿಯೆಂಬುವನು ಮಗಧ ದೇಶವನ್ನು ಆಳುತ್ತಿದ್ದನು. ಆ ವಂಶದ ದೊರೆಗಳು ಬಹಳ ಕಾಲ ರಾಜ್ಯವಾಳಿದರು. ಅವರ ತರುವಾಯ ವಿಕ್ರಮರಾಯನೆಂಬುವನಿಗೆ ಈ ಸಿಂಹಾಸನವು ದೊರೆಯಿತು. ಅವನು ಬಹಳ ಪರಾಕ್ರಮಿಯೂ ಸತ್ಯವಂತನೂ ಆಗಿದ್ದನು. ಅವನು ಅರವತ್ತು

ನೂರು ವರ್ಷಗಳ ಕಾಲ ಬಹು ಧರ್ಮದಿಂದ ರಾಜ್ಯವಾಳಿದನು. ಅವನ ಕಾಲಾನಂತರ ಸಿಂಹಾಸನವು ಮಾಳವ ದೇಶದ ದೊರೆಗಳ ಕೈಸೇರಿತು. ತರುವಾಯ ಅವಂತೀ ದೇಶದ ಭೋಜರಾಜನ ವಶವಾಯಿತು. ಅವನ ತರುವಾಯ ಕಾಲಕ್ರಮದಲ್ಲಿ ಈ ಸಿಂಹಾಸನವು ಹಳೇಬೀಡಿನ ನವಬಲ್ಲಾಳರ ಮನೆತನದ ಅರಸುಗಳಿಗೆ ಸೇರಿತು. ಅವರು ಆಳಿದ ಮೇಲೆ, ಕಾಲಗತಿಯಿಂದ ಪೆನುಗೊಂಡೆಯ ಕಂಪಲರಾಯನ ವಶವಾಯಿತು. ಆ ಕಂಪಲರಾಯನು ತನ್ನ ಅವಸಾನಕಾಲದಲ್ಲಿ ಯಾರೂ ಅರಿಯದಂತೆ ಈ ಸಿಂಹಾಸನವನ್ನು ನೆಲಮಾಳಿಗೆ ಯಲ್ಲಿ ಇರಿಸಿದನಂತೆ. ಅದು ಬಹಳ ಕಾಲ ಭೂಮಿಯಲ್ಲಿಯೇ ಇತ್ತು. ಆ ಸ್ಥಳದಲ್ಲಿ ಹುಲ್ಲು ಬೆಳೆದುಕೊಂಡು ಯಾರಿಗೂ ಅದರ ಕುರುಹೇ ಸಿಕ್ಕದಂತಾಯಿತು.

ಇದಾದ ಬಹಳ ದಿನಗಳಮೇಲೆ, ತುಂಗಭದ್ರಾ ನದಿಯ ತೀರದ ಕಾಡಿನಲ್ಲಿ ವಿದ್ಯಾರಣ್ಯರೆಂಬವರು ಪರ್ಣಶಾಲೆಯನ್ನು ಕಟ್ಟಿಕೊಂಡು ತಪಸ್ಸು ಮಾಡುತ್ತಿದ್ದರು. ಅವರು ಮಹಾಪುರುಷರು. ಸನಾತನ ಧರ್ಮವನ್ನು ಉದ್ಧಾರಮಾಡಿದ ಪುಣ್ಯಾತ್ಮರು. ಆ ಕಾಲದಲ್ಲಿ ವಿಧರ್ಮಿಗಳ ಹಾವಳಿಯಿಂದ ವೈದಿಕ ಧರ್ಮಕ್ಕೆ ಹಾನಿ ತಟ್ಟಿದ್ದಿತು. ನಮ್ಮ ಜನರಲ್ಲಿ ಒಗ್ಗಟ್ಟಿರಲಿಲ್ಲ. ನಮ್ಮ ನಾಡು, ನಮ್ಮ ಧರ್ಮ ಕಳೆಗುಂದುತ್ತಿದ್ದುವು. ವಿದ್ಯಾರಣ್ಯರು ಲೋಕ ಹಿತಕ್ಕಾಗಿ ಯಾವಾಗಲೂ ಶ್ರೀ ಭುವನೇಶ್ವರಿಯನ್ನು ಕುರಿತು ತಪಸ್ಸು ಮಾಡು ತ್ತಿದ್ದರು.

ಆ ಕಾಲದಲ್ಲಿ ಪ್ರತಾಪರುದ್ರರಾಯನೆಂಬುವನು ಓರಗಲ್ಲು ರಾಜ್ಯದ ದೊರೆಯಾಗಿದ್ದನು. ಹುಕ್ಕ ಬುಕ್ಕ ಎಂಬ ಇಬ್ಬರು ಸಹೋದರರು ಆ ದೊರೆಯ ಭಂಡಾರದ ಅಧಿಕಾರಿಗಳಾಗಿದ್ದರು. ಕಾರಣಾಂತರದಿಂದ ಅವ ರಿಬ್ಬರೂ ಓರಗಲ್ಲನ್ನು ಬಿಟ್ಟು ಬಂದರು. ಅವರು ತಾವೇ ಒಂದು ರಾಜ್ಯವನ್ನು ಕಟ್ಟಬೇಕೆಂದು ಯೋಚಿಸಿಕೊಂಡು ಕಾರ್ಯತತ್ಪರರಾಗಿದ್ದರು. ಅವರು ಅಲ್ಲಲ್ಲಿ ಸಂಚರಿಸುತ್ತ ತುಂಗಭದ್ರಾ ನದಿಯ ತೀರದ ಕಾಡಿನಲ್ಲಿ ಒಂದು ದಿನ ಬೇಟೆಗಾಗಿ ಬಂದರು. ಬೇಟೆಯಿಂದ ಆಯಾಸಗೊಂಡ ಅವರಿಬ್ಬರೂ ಒಂದು ಮರದ ಕೆಳಗೆ ಮಲಗಿ ನಿದ್ರಿಸುತ್ತಿದ್ದರು. ಆ ಸಮಯದಲ್ಲಿ ಒಂದು ಸರ್ಪವು ಹೆಡೆಯನ್ನು ಅರಳಿಸಿಕೊಂಡು ಹುಕ್ಕನ ತಲೆಯಮೇಲೆ ಬಿಸಿಲು ಬೀಳದಂತೆ ಮಾಡಿದ್ದಿತು. ಆ ಸಮಯಕ್ಕೆ ಸರಿಯಾಗಿ ವಿದ್ಯಾರಣ್ಯ ಯತಿವರ್ಯರು

ಮಾರ್ಗವಶದಿಂದ ಅಲ್ಲಿಗೆ ಬಂದು ಆ ಆಶ್ಚರ್ಯವನ್ನು ಕಂಡರು. ಹುಕ್ಕ ಬುಕ್ಕರು ಅದೃಷ್ಟವಂತರೆಂದು ಅವರಿಗೆ ವ್ಯಕ್ತವಾಯಿತು. ಅವರಿಗೆ ನಿದ್ರೆಯಿಂದ ಎಚ್ಚರವಾಯಿತು. ಆಗ ಅವರಿಬ್ಬರೂ ವಿದ್ಯಾರಣ್ಯರನ್ನು ಕಂಡು ಭಕ್ತಿಯಿಂದ ವಂದಿಸಿದರು. ಅಲ್ಲಿಂದ ಮುಂದೆ ಅವರಿಬ್ಬರೂ ಆ ಯತಿಯ ಶುಶ್ರೂಷೆಯಲ್ಲಿ ನಿಂತರು.

ಹೀಗಿರುತ್ತಿರಲಾಗಿ, ಒಂದು ದಿನ ಭುವನೇಶ್ವರೀ ದೇವಿಯು ವಿದ್ಯಾರಣ್ಯರ ಸ್ವಪ್ನದಲ್ಲಿ ಬಂದು "ನೀನು ಹುಕ್ಕಬುಕ್ಕರಿಂದ ರಾಜ್ಯಸ್ಥಾಪನೆ ಮಾಡಿಸು. ಅವರು ಉತ್ತಮ ಕ್ಷತ್ರಿಯ ವಂಶಜರು. ಆ ದಿನ ಹುಕ್ಕನ ತಲೆಯಮೇಲೆ ಸರ್ಪ ಹೆಡೆಯಾಡಿಸುತ್ತಿದ್ದ ಸ್ಥಳದಲ್ಲಿರುವ ಪಾಂಡು ಪುತ್ರನಾದ ಧರ್ಮರಾಯನ ಸಿಂಹಾಸನವು ಇವರಿಗೆ ಯೋಗ್ಯವಾದುದು" ಎಂದು ಹೇಳಿ ಅಂತರ್ಧಾನ ಳಾದಳು. ಭುವನೇಶ್ವರಿಯು ಹೇಳಿದ್ದ ಮೇರೆಗೆ, ವಿದ್ಯಾರಣ್ಯರು ಆ ಸ್ಥಳವನ್ನು ಅಗೆಯಿಸಿ ಅಲ್ಲಿದ್ದ ಸಿಂಹಾಸನವನ್ನು ತೆಗೆಯಿಸಿಕೊಂಡು ಬಂದರು. ಇದು ಹಿಂದೆ ಕಂಪಲರಾಯನು ಹೂತಿಟ್ಟಿದ್ದ ಸಿಂಹಾಸನ. ವಿದ್ಯಾರಣ್ಯರು ವಿಜಯ ನಗರ ಸಾಮ್ರಾಜ್ಯವನ್ನು ಸ್ಥಾಪಿಸಿ, ಹುಕ್ಕನನ್ನು ಆ ಸಿಂಹಾಸನದ ಮೇಲೆ ಕೂಡಿಸಿ, ಪಟ್ಟಾಭಿಷೇಕ ಮಾಡಿದರು. ಅಂದಿನಿಂದಲೂ ಆ ಸಿಂಹಾಸನ ವಿಜಯ ನಗರ ಸಾರ್ವಭೌಮರ ವಶದಲ್ಲಿದ್ದಿತು.

ಕಾಲಧರ್ಮದಿಂದ ವಿಜಯನಗರ ಹಾಳಾಯಿತು. ಆ ಸಿಂಹಾಸನವು ವಿಜಯನಗರದ ಕಡೆಯ ಅಧಿಕಾರಿಯಾದ ಶ್ರೀ ರಂಗರಾಯರ ಕೈಸೇರಿತು. ಶ್ರೀ ರಂಗರಾಯನು ಶ್ರೀರಂಗಪಟ್ಟಣದಲ್ಲಿ ಅಧಿಕಾರ ಮಾಡುತ್ತಿದ್ದನು. ಅವನು ತನ್ನ ಅವಸಾನಕಾಲದಲ್ಲಿ ಆ ಸಿಂಹಾಸನವನ್ನು ಆಗ ಮೈಸೂರು ದೊರೆಗಳಾಗಿದ್ದ ರಾಜ ಒಡೆಯರಿಗೆ ಕೊಟ್ಟುಬಿಟ್ಟನು. ಅಂದಿನಿಂದಲೂ ಆ ಧರ್ಮ ಸಿಂಹಾಸನವು ಮೈಸೂರು ಒಡೆಯರ ಕೈಯಲ್ಲಿದೆ.

*ಈ ಸಿಂಹಾಸನವನ್ನು ಅತ್ತಿಯ ಮರದಿಂದ ತಯಾರಿಸಿದ್ದಾರೆ. ಚಿಕ. ದೇವರಾಜ ಒಡೆಯರು ಇದಕ್ಕೆ ದಂತದ ಕೆತ್ತನೆಯ ಕೆಲಸವನ್ನು ಮಾಡಿಸಿದರು

---

* ಬ್ರಹ್ಮಾವಿಷ್ಣುರ್ಮಹೇಶಶ್ಚ ಸ್ವಸ್ವಶಕ್ತಿ ಸಮನ್ವಿತಾಃ ॥
ರತ್ನಸಿಂಹಾಸನಾರೂಢಂ ರಕ್ಷಂತು ತ್ವಾಮಹರ್ನಿಶಮ್ ॥

ಆ ಸಿಂಹಾಸನದ ಬಲಗಡೆ ಮೆಟ್ಟಲುಗಳಿವೆ. ಆ ಮೆಟ್ಟಲುಗಳ ಎರಡು ಕಡೆಯಲ್ಲಿಯೂ ಸುವರ್ಣ ಪುತ್ಥಳಿಗಳನ್ನು ಕೆತ್ತಿರುತ್ತಾರೆ. ಸಿಂಹಾಸನದಲ್ಲಿ ಪ್ರಭುಗಳು ಸುಖಾಸೀನರಾಗಿ ಮಂಡಿಸಲು ಅನುಕೂಲವಾಗಿರುವಂತೆ ರೇಷ್ಮೆಯ ಮತ್ತು ಕಲಾಬತ್ತಿನ ದಿಂಬುಗಳಿರುತ್ತವೆ.

ಚಿಕ್ಕ ದೇವರಾಜ ಒಡೆಯರ ತರುವಾಯ ರಾಜ್ಯವಾಳಿದ ಕಂಠೀರವ ಒಡೆಯರೂ, ದೊಡ್ಡ ಕೃಷ್ಣರಾಜ ಒಡೆಯರೂ, ಚಾಮರಾಜ ಒಡೆಯರೂ ಮತ್ತು ಇಮ್ಮಡಿ ಕೃಷ್ಣರಾಜ ಒಡೆಯರೂ ಈ ರತ್ನ ಸಿಂಹಾಸನದ ಮೇಲೆ

---

ವಾಣೀ ವಾಗ್ವೈಖರೀಂ ದದ್ಯಾಲ್ಲಕ್ಷ್ಮೀಸ್ಸಂಪದ ಮೂರ್ಜಿತಾಂ ।
ಮಂಗಲಾನಿ ಸದಾ ದದ್ಯಾದ್ಭವತೇ ಸರ್ವಮಂಗಲಾ ॥

* * * *

ಪ್ರತಾಪಂ ತವ ಪುಷ್ಣಾತು ಲೋಕಚಕ್ಷುರ್ಗಭಸ್ತಿಮಾನ್ ।
ನಿರ್ಮಲಾಂ ಚಂದ್ರಮಾಃ ಕೀರ್ತಿಂ ಮಂಗಲಾನಿ ಮಹೀಸುತಃ ॥

ಸೌಮ್ಯತಾಮಿಂದುಜೋದದ್ಯಾತ್ಪ್ರಾಜ್ಞತ್ವಂ ಸುರದೇಶಿಕಃ ।
ಸುನೀತಿಂ ಕವಿರಾಡ್ದದ್ಯಾತ್ಸುಖಂ ಶನಿರನುತ್ತಮಮ್ ॥

ರಾಹುರ್ಬಾಹುಬಲಂ ದದ್ಯಾತ್ಕೇತುಸ್ತವ ಕುಲೋನ್ನತಿಂ ।
ಸರ್ವೇಗ್ರಹಾಸ್ಸನಕ್ಷತ್ರಾಃ ಸುಪ್ರಸನ್ನಾಭವಂತು ತೇ ॥

ದುರ್ಗಾದೇವೀ ಗಣೇಶಶ್ಚ ಕ್ಷೇತ್ರಪಾಲೋ ಭಯಂಕರಃ ।
ವಾಸ್ತೋಷ್ಪತಿಃ ಪ್ರಸನ್ನಾತ್ಮಾ ಸರ್ವೇ ರಕ್ಷಂತು ಸರ್ವತಃ ॥

* * * *

ಐರಾವತಂ ಸಮಾಸ್ಥಾಯ ವಜ್ರಹಸ್ತಃ ಪುರಂದರಃ ।
ತನೋತು ಸಂಪದಾಂ ವೃದ್ಧಿಂ ತವರಾಜ್ಯಂ ಪ್ರಶಾಸತಃ ॥

ಮೇಷಾರೂಢಸ್ಸಪ್ತಹಸ್ತಸ್ಸ್ರುಕ್ಸ್ರುವಾದ್ಯಾಯುಧೋಽನಲಃ ।
ತೇಜಸ್ವಿತಾಂ ಪ್ರದದ್ಯಾತೇ ಸಿಂಹಪೀಠಾಧಿರೋಹಿಣಃ ॥

ದಂಡಾದಿಕಾಯುಧೋಪೇತೋ ಮಹಿಷೋಪರಿ ಸಂಸ್ಥಿತಃ ।
ಧರ್ಮರಾಜ ಪ್ರಸನ್ನತೇ ದದ್ಯಾದ್ಧರ್ಮೇ ಮತಿಂ ಸ್ಥಿರಾಂ ॥

* ನರಾರೂಢೋ ಗದಾಪಾಣಿರ್ಯಾತುಧಾನ ಗಣೇಶ್ವರಃ ।
ದುಷ್ಟಗ್ರಹಭಯಂ ಭಿಂದ್ಯಾತ್ತವಪೃಥ್ವೀ ಪ್ರಶಾಸತಃ ॥

ಮುಂಡಿಸಿ ಧರ್ಮದಿಂದ ಪ್ರಜಾಪರಿಪಾಲನೆ ಮಾಡಿದರು. ಇವರ ಆಳ್ವಿಕೆಯಲ್ಲಿ ಹೈದರನೂ, ಆ ತರುವಾಯ ಟೀಪ್ಪೂ ಸುಲ್ತಾನನೂ ಪ್ರಬಲವಾಗುತ್ತ ಬಂದದ್ದರಿಂದ ಮುಂದೆ ಹೆಸರಿಗೆ ಮಾತ್ರ ದೊರೆಗಳಾಗಿದ್ದ ನಂಜರಾಜ ಒಡೆಯರೂ, ಬೆಟ್ಟದ ಚಾಮರಾಜ ಒಡೆಯರೂ, ಖಾಸಾ ಚಾಮರಾಜ ಒಡೆಯರೂ ಈ ಸಿಂಹಾಸನದಲ್ಲಿ ಕುಳಿತು ರಾಜ್ಯಭಾರ ಮಾಡುವ ಅವಕಾಶವಿರಲಿಲ್ಲ. ಲಕ್ಷ್ಮಮ್ಮಣ್ಣಿಯವರು ಆ ಪರಿಸ್ಥಿತಿಯನ್ನು ಕಂಡು ಅತಿ ದುಃಖಪಟ್ಟರು. ಮೈಸೂರು ರಾಜ್ಯಲಕ್ಷ್ಮಿ ರತ್ನಸಿಂಹಾಸನಾಧೀಶ್ವರರನ್ನು ಓಲೈಸುವ ಭಾಗ್ಯವನ್ನು ಕಣ್ಣಾರೆ ಕಂಡು ನಲಿಯಬೇಕೆಂಬ ಮಹಾಸಂಕಲ್ಪವನ್ನು ಸಾಧಿಸಲು ಪ್ರಯತ್ನಪಟ್ಟರು. ಅವರ ಕ್ರಿಯಾಸಿದ್ಧಿಯ ಬಲದಿಂದ ಈ ರತ್ನಸಿಂಹಾಸನದ ಮೇಲೆ ಅವರ ಮೊಮ್ಮಗ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು ಪಟ್ಟಾಭಿಷಕ್ತರಾದರು. ಇವರು ಆ ಸಿಂಹಾಸನಕ್ಕೆ ಅನುರೂಪವಾದ ಚಿನ್ನದ ತಗಡನ್ನು ಹಾಕಿಸಿ, ವಜ್ರ ವೈಡೂರ್ಯಾದಿ ನವರತ್ನಗಳಿಂದ ಮನೋಹರವಾಗಿ ಅಲಂಕಾರ ಮಾಡಿಸಿದರು. ಲಕ್ಷ್ಮಮ್ಮಣ್ಣಿಯವರ ಅಭಿಮತದಂತೆ ಒಡೆಯರು ಸಿಂಹಾಸನಕ್ಕೆ ಚಿನ್ನದ ಶಿರಾಣಿಯನ್ನು ಇಡಿಸಿದರು.

---

ಪ್ರಚೇತಾನಕ್ರಮಾರೂಢಃ ಪಾಶಾದ್ಯಾಯುಧ ಸಂಯುತಃ ।
ದದ್ಯಾತ್ಪ್ರಸನ್ನಚಿತ್ತತ್ವಂ ಶುಚಿತ್ವಂ ಸದಾತವ ॥

ಬಿಭ್ರಚ್ಚೂರ್ಪಂ ಮೃಗಾರೂಢಃ ಪ್ರಾಣಾನಾಮೀಶ್ವರೋ ಮರುತ್ ।
ಆರೋಗ್ಯಂ ಬಲಸಂಪತ್ತಿಂ ದದ್ಯಾತ್ತವ ನಿರಂತರಮ್ ॥

ಅಶ್ವಾರೂಢಃ ಖಡ್ಗಹಸ್ತೋ ರಾಜರಾಜೋ ಮಹಾಯಶಾಃ ।
ದದ್ಯಾದ್ಧನರ್ಧಿಮಕ್ಷಯ್ಯಾಂ ತ್ಯಾಗೇ ಸತ್ಯಪಿ ಭೂರಿಶಃ ॥

ತುರಿಗಂ ಪುಂಗವಮಾರೂಢಃ ಶೂಲಾಧ್ಯಾಯುಧ ಜಾಟ ಭೃತ್ ।
ದೇವದೇವೋ ಮಹೇಶಾನೋ ದದ್ಯಾದಾಯುಷ್ಯ ಮೂರ್ಜಿತಂ ॥

ದಿಲೀಪ ಸ್ಸಗರೋ ರಾಮೋ ಹರಿಶ್ಚಂದ್ರೋ ನಳ ಸ್ತಥಾ ।
ಯಂ ಧರ್ಮಮನ್ವರ್ತಂತ ತಂ ಧರ್ಮಮನುಪಾಲಯ ॥

(ಶ್ರೀ॥ ಸಿ. ಕೆ. ವೆಂಕಟರಾಮಯ್ಯ, ಎಂ. ಎ, ಎಲ್ಎಲ್. ಬಿ. ಅವರ "ಆಳಿದ ಮಹಾಸ್ವಾಮಿಯವರು" ಎಂಬ ಗ್ರಂಥದಿಂದ.)

ಸಿಂಹಾಸನದ ಶ್ವೇತಚ್ಛತ್ರದ ಸುವರ್ಣ ದಂಡದ ಮೇಲೆ ಅಂದವಾಗಿ ಕಾಣುವ ಪುಟ್ಟಪುಟ್ಟ ಸ್ಫುಟವಾದ ಅಕ್ಷರಗಳಲ್ಲಿ ಕೆಲವು ಸುಂದರವಾದ ಶ್ಲೋಕ ಗಳನ್ನು ಕೊರೆದಿದ್ದಾರೆ. "ದೇವಿಯರ ರೂಪದ ಶಕ್ತಿ ಸಮನ್ವಿತರಾದ ಬ್ರಹ್ಮಾ ವಿಷ್ಣು ಮಹೇಶ್ವರರು ರತ್ನಸಿಂಹಾಸನಾರೂಢನಾದ ನಿನ್ನನ್ನು ಹಗಲಿರುಳೂ ಸಂರಕ್ಷಿಸಲಿ? ವಾಣಿಯು ವಾಗ್ವೈಖರಿಯನ್ನೂ, ಲಕ್ಷ್ಮಿಯು ಶಾಶ್ವತ ಸಂಪತ್ತನ್ನೂ ಸರ್ವ ಮಂಗಳೆಯು ಮಂಗಳವನ್ನೂ ಸರ್ವದಾ ನಿನಗೀಯಲಿ! ಲೋಕಚಕ್ಷುವಾದ ಸೂರ್ಯನು ನಿನ್ನ ಪ್ರಕಾಶವನ್ನು ಹೆಚ್ಚಿಸಲಿ! ಚಂದ್ರನು ನಿನ್ನ ನಿರ್ಮಲ ಕೀರ್ತಿಯನ್ನೂ ಅಂಗಾರಕನು ಸನ್ಮಂಗಳಗಳನ್ನೂ ವೃದ್ಧಿ ಗೊಳಿಸಲಿ! ಬುಧನು ಸೌಮ್ಯತೆಯನ್ನೂ, ಬೃಹಸ್ಪತಿಯು ಪ್ರಾಜ್ಞತೆಯನ್ನೂ, ಶುಕ್ರನು ಸುನೀತಿಯನ್ನೂ, ಶನಿಯು ಅತ್ಯಂತ ಶ್ರೇಷ್ಠತಮವಾದ ಸುಖವನ್ನೂ ಕೊಡಲಿ. ರಾಹುವು ಬಾಹು ಬಲವನ್ನೂ, ಕೇತುವು ಕುಲೋನ್ನತಿಯನ್ನೂ ನಿನಗೀಯಲಿ! ಸನಕ್ಷತ್ರವಾದ ಸರ್ವಗ್ರಹಗಳೂ ನಿನ್ನಲ್ಲಿ ಸುಪ್ರಸನ್ನರಾಗಿರಲಿ! ದುರ್ಗಾದೇವಿಯೂ, ಗಣೇಶನೂ, ಭಯಂಕರವಾದ ಕ್ಷೇತ್ರಪಾಲನೂ, ವಾಸ್ತೋ ಷ್ಪತಿಯೂ ನಿನ್ನನ್ನು ಕಾಪಾಡಲಿ! ರಾಜ್ಯಶಾಸನ ಮಾಡುವ ನಿನಗೆ ಮಹೇಂದ್ರನು ಸಂಪದ್ವೃದ್ಧಿಯನ್ನೂ, ಸಿಂಹಾಸನಾರೂಢನಾದ ನಿನಗೆ ಅಗ್ನಿಯು ತೇಜಸ್ವಿತೆಯನ್ನೂ, ಯಮಧರ್ಮನು ಧರ್ಮಾಚರಣೆಯಲ್ಲಿ ಸ್ಥಿರಮನಸ್ಸನ್ನೂ ಕೊಡಲಿ! ನೈಋತ್ಯಾಧಿಪನು ದುಷ್ಟಗ್ರಹಭಯವನ್ನು ನಾಶಗೊಳಿಸಲಿ! ವರುಣನು ನಿನಗೆ ಪ್ರಸನ್ನ ಚಿತ್ತವನ್ನೂ ಶುಚಿತ್ವವನ್ನೂ ಕೊಡಲಿ! ವಾಯುವು ಆರೋಗ್ಯವನ್ನೂ ಬಲಸಂಪತ್ತಿಯನ್ನೂ ಕೊಡಲಿ! ತ್ಯಾಗಮಾಡಿಯೂ ವೃದ್ಧಿ ಯಾಗುತ್ತ ಅಕ್ಷಯವಾಗಿರುವ ಸಂಪತ್ತನ್ನು ಕುಬೇರನು ನಿನಗೀಯಲಿ! ದೇವ ದೇವನಾದ ಮಹೇಶ್ವರನು ದೀರ್ಘಾಯುಷ್ಯ ವನ್ನು ಕೊಡಲಿ! ದಿಲೀಪನೂ, ಸಗರನೂ, ಶ್ರೀರಾಮನೂ, ಹರಿಶ್ಚಂದ್ರನೂ, ನಳನು ಅನುಸರಿಸಿದ ಧರ್ಮವನ್ನು ಪರಿಪಾಲಿಸು" ಎಂಬುದು ಅವುಗಳಲ್ಲಿ ಕೆಲವು ಶ್ಲೋಕಗಳ ತಾತ್ಪರ್ಯ. ಇಂಥ ಪವಿತ್ರವಾದ ರತ್ನಸಿಂಹಾಸನ ಕಳೆಗುಂದಿ ಮೂಗುಂಪಾಗಿ ಬಿದ್ದಿದ್ದ ಸಮಯ ದಲ್ಲಿ ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ತಮ್ಮ ವಂಶ ವೈಭವವನ್ನು ಮತ್ತೆ ಮೆರೆಯಿಸಬೇಕೆಂದು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಅವರು ಸಾಮಾನ್ಯ ರಾಜಸ್ತ್ರೀಯಂತೆ ಕಾಲಯಾಪನೆ ಮಾಡಲಿಲ್ಲ. ಅಖಂಡ ಕರ್ಣಾಟಕದಲ್ಲಿ

ಕೀರ್ತಿವಂತರಾಗಿ ರಾಜ್ಯವಾಳಿದ ಕನ್ನಡ ಕುಲದ ರಾಜಮನೆತನಗಳು ಅದು ವರೆಗೆ ಕಣ್ಮರೆಯಾಗಿದ್ದುವು. ಈಗಲೂ ಪರಿಶುದ್ಧ ಕನ್ನಡ ರಾಜಮನೆತನ ವೆಂದರೆ ಮೈಸೂರು ಯದುವಂಶ ಒಂದೇ! ಮಹಾತಾಯಿ ಲಕ್ಷ್ಮಮ್ಮಣ್ಣಿ ಯವರು ಅಂದು ಪ್ರಯತ್ನಶೀಲರಾಗಿ ದಿಟ್ಟತನದಿಂದ ವರ್ತಿಸದಿದ್ದರೆ ಇಂದು ನಾವು ಯದುಕುಲ ಸಂತತಿಯ ಆಶ್ರಯದಲ್ಲಿ ನೆಮ್ಮದಿಯಾಗಿ ಬಾಳತಕ್ಕ ಪುಣ್ಯವೇ ನಮಗೆ ಲಭಿಸುತ್ತಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದು. ಅವರು ರಾಜವಂಶದ ಪುಣ್ಯದೇವತೆಯಾದಂತೆಯೇ ಮೈಸೂರು ನಾಡಿನ ಮಹಾ ಮಾತೆಯಾದರು.

ಅವರು ಶ್ರೀರಂಗಪಟ್ಟಣದಲ್ಲಿದ್ದಾಗ ಶ್ರೀರಂಗನಾಥನನ್ನು ಆರಾಧಿಸುತ್ತಿದ್ದರು. ಯದುವಂಶದ ಮೂಲಪುರುಷನಾದ ಶ್ರೀ ಕೃಷ್ಣನೇ ಶ್ರೀರಂಗನಾಗಿ ನೆಲಸಿದ್ದಾನೆಂದು ಅವರು ತಿಳಿದು ಯಾವಾಗಲೂ ಆ ಸ್ವಾಮಿಯನ್ನು ನೆನೆಯುತ್ತ "ದೇವದೇವಾ! ರಾಕ್ಷಸವಿದಾರಕ! ಶ್ರೀರಂಗನಾಥ! ಯದು ವಂಶವನ್ನು ಇಂದು ಮುತ್ತಿರುವ ಶತ್ರುಪೀಡೆಯನ್ನು ಪರಿಹರಿಸುವದರಲ್ಲಿ ಅನಾಥಳೂ ಹತಭಾಗ್ಯಳೂ ಆದ ನನ್ನ ಮೊರೆ ನಿನಗೆ ಕೇಳಿಸುವುದಿಲ್ಲವೆ! ನೀನೇಕೆ ಆಲಸನಾಗಿರುವೆ! ಶೇಷಶಾಯಿ! ನಿದ್ರೆಯಿಂದ ನಿನಗೆ ಎಚ್ಚರವಿಲ್ಲವೆ! ದುಷ್ಟ ಶತ್ರುಗಳ ಗುಂಪಿನಲ್ಲಿ ಮಾನವತಿ ದ್ರೌಪತಿಯ ಮಾನಸಂರಕ್ಷಣೆ ಮಾಡಿದವನೇ ನೀನಲ್ಲವೇ! ಇಂದು ಯದುವಂಶ ಲಕ್ಷ್ಮಿ, ದ್ರೌಪದಿಯಂತೆ ಶತ್ರು ಮಧ್ಯದಲ್ಲಿ ಲಜ್ಜಾಹೀನಳಾಗಿ ತಲೆತಗ್ಗಿಸಬೇಕಾಗಿದೆ. ಇದನ್ನು ನೋಡಿಯೂ ಸುಮ್ಮನಿರುವೆಯಾ! ಶತ್ರುಸಂಹಾರ ಮಾಡಿದ ಚಕ್ರಪಾಣಿಯೆ! ನಿನ್ನ ಚಕ್ರಬಲದಿಂದ ಅರಿಷ್ಟ ಪರಂಪರೆಯನ್ನು ಪರಿಹರಿಸು! ಗದಾಧಾರಿಯೇ! ಶತ್ರುಗಳನ್ನು ಪುಡಿಪುಡಿಮಾಡಿ ನನ್ನ ವಂಶವನ್ನು ಉದ್ಧಾರಮಾಡು! ಭಾರತ ಯುದ್ಧಭೂಮಿಯಲ್ಲಿ ಮೊಳಗಿದ ನಿನ್ನ ಪಾಂಚಜನ್ಯ ಶಂಖಧ್ವನಿಯು ಮತ್ತೊಮ್ಮೆ ಮೊಳಗಲಿ! ಶತ್ರುನಿರ್ನಾಮವಾಗಲಿ! ಯದುಕುಲಾಭಿಮಾನಿ ಯಾದ ಶ್ರೀರಂಗನಾಥಾ! ನೀನೇ ಶರಣ್ಯನು! ನನಗೆ ಆತ್ಮಶಕ್ತಿಯನ್ನು ದಯಪಾಲಿಸು. ಸ್ವಾತಂತ್ರ್ಯಜ್ಯೋತಿಯನ್ನು ಬೆಳಗಿಸು!" ಎಂದು ಹಲವು

ಬಗೆಯಿಂದ ಬೇಡುತ್ತ ಕಣ್ಣೀರು ಸುರಿಸುತ್ತಿದ್ದರು. ಇಂಥ ರಾಜಯೋಗಿಣಿ
ಯಂತೆ, ವೀರ ತಪಸ್ವಿನಿಯಂತೆ ಅವರು ಕರ್ಮತಪೋನಿರತರಾಗಿದ್ದರು!

ಹೀಗಿರಲು, ಒಂದು ದಿನ ಅವರ ಸ್ವಪ್ನದಲ್ಲಿ ಶ್ರೀರಂಗನಾಥನ ಸಂದರ್ಶನ
ವಾಯಿತು! ಆ ಪರಮಾತ್ಮನ ದಿವ್ಯ ಮಂಗಳ ವಿಗ್ರಹವನ್ನು ಕಂಡು ಆನಂದಿಸಿ
ದರು. ಪರಮಾತ್ಮನು "ಅಮ್ಮಾ! ನಿನ್ನ ದುಃಖ ಕಳೆದುಹೋಗುತ್ತದೆ.
ಯದುವಂಶದ ಶುಭೋದಯವಾಗುತ್ತದೆ. ಶತ್ರುನಾಶವಾಗಿ ಮೈಸೂರು
ರಾಜ್ಯಲಕ್ಷ್ಮಿ ನಿರಾತಂಕವಾಗಿ ನಲಿಯುತ್ತಾಳೆ" ಎಂದು ಹೇಳಿದಂತೆ ಭಾಸ
ವಾಯಿತು.

ಮರುದಿನ, ಲಕ್ಷ್ಮಮ್ಮಣ್ಣಿಯವರು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು
ಶ್ರೀ ರಂಗನಾಥನ ದೇವಸ್ಥಾನಕ್ಕೆ ದಯೆಮಾಡಿಸಿ ವಿಶೇಷ ಪೂಜೋತ್ಸವವನ್ನು
ನೆರವೇರಿಸಿ, ಪರಮಾತ್ಮನ ದಿವ್ಯ ಸಂದರ್ಶನವನ್ನು ಮಾಡಿ ಆನಂದಬಾಷ್ಪ
ಗಳನ್ನು ಸುರಿಸಿದರು.

# ಅಧ್ಯಾಯ ೧೧

## ರಾಜಕೀಯ ಜೀವನ ; ಕಾರ್ಯಸಾಧನೆ

ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರ ವ್ಯಕ್ತಿಪ್ರಭಾವವನ್ನು ಅರಿಯ ಬೇಕಾದರೆ ಆಗಿನ ರಾಜಕೀಯ ಪರಿಸ್ಥಿತಿಯನ್ನು ಸಿಂಹಾವಲೋಕನದಿಂದ ನೋಡಬೇಕು. ಅವರು ಎಷ್ಟು ಧೈರ್ಯದಿಂದ ಕಾರ್ಯಸಂಧಾನ ಮಾಡಿದ ರೆಂಬುದು ವ್ಯಕ್ತವಾಗುತ್ತದೆ. ಅವರಿಗೆ ಒದಗಿದ್ದ ಇಕ್ಕಟ್ಟಿನ ಸಂದರ್ಭದಲ್ಲಿಯೂ ಅವರು ಸ್ವಲ್ಪಮಾತ್ರವೂ ಅಳುಕಿದವರಲ್ಲ. ಅವರು ರಾಜಪತ್ನಿ, ರಾಜಮಾತೆ ಮತ್ತು ರಾಜಕಾರ್ಯನಿರ್ವಾಹಕರೂ ಆಗಿದ್ದುದರಿಂದ ರಾಜಕೀಯ ಜೀವನ ದಿಂದ ಅವರು ದೂರವಾಗಿರಲಿಲ್ಲ. ಅವರ ಜೀವನ ಚರಿತ್ರೆಯೆಂದರೆ ಆಗಿನ ಮೈಸೂರು ರಾಜ್ಯದ ಚರಿತ್ರೆಯೇ ಆಗಿದೆ. ಸುಮಾರು ಐವತ್ತು ವರ್ಷಗಳ ಕಾಲ ಅವರು ರಾಜಕೀಯ ಜೀವನದಲ್ಲಿ ಬೆರೆತರು. ಅವರು ಇಮ್ಮಡಿ ಕೃಷ್ಣರಾಜ ಒಡೆಯರನ್ನು ಮದುವೆಯಾದ ಮೇಲೆ, ರಾಜ್ಯ ಜೀವನದಲ್ಲಿ ಒದಗಿದ ಒಂದೊಂದು ಘಟನೆಯನ್ನೂ ಪರಿಶೀಲಿಸಬೇಕು. ಆಗ ಲಕ್ಷ್ಮಮ್ಮಣ್ಣಿ ಯವರ ವ್ಯಕ್ತಿತ್ವ ಚಿತ್ರವು ಅಚ್ಚಳಿಯದಂತೆ ನಮ್ಮ ಮನಸ್ಸಿನಲ್ಲಿ ನಿಲ್ಲುತ್ತದೆ. ಈ ಐವತ್ತು ವರ್ಷದಲ್ಲಿ ಅವರು ದುರಂತ ಸನ್ನಿವೇಶಗಳನ್ನು ಎದುರಿಸಬೇಕಾ ಯಿತು. ಅವರು ರಾಜಭೋಗದ ಸುಖಸುಪ್ಪತ್ತಿಗೆಯ ಮೇಲೆ ಮೆರೆದ ಕಾಲ ಸ್ವಲ್ಪವೇ. ಕಷ್ಟದ ಮುಳ್ಳುಹಾಸಿಗೆಯೇ ಅವರಿಗೆ ಕೊನೆಯವರೆಗೂ ಲಭಿಸಿತು. ಅವರು ಪಡಬಾರದ ಕಷ್ಟಗಳನ್ನು ಪಡಬೇಕಾದರೆ ಅವರಿಗೆ ಒದಗಿದ ಘಟನೆ ಗಳನ್ನು ಅರಿಯಬೇಕು.

ಮೈಸೂರು ಸಂಸ್ಥಾನದಲ್ಲಿ ಸುವರ್ಣಯುಗವನ್ನು ಸ್ಥಾಪಿಸಿದ ಚಿಕ್ಕ ದೇವರಾಜ ಒಡೆಯರ ತರುವಾಯ ಮೈಸೂರು ಸಂಸ್ಥಾನದ ಚರಿತ್ರೆಯೇ ಬೇರೆಯಾಯಿತು. ದಿಹಲಿ ಬಾದಷಹ ಔರಂಗಜೇಬನಿಂದ ರಾಜಮನ್ನಣೆಯನ್ನು ಪಡೆದು, ಮೈಸೂರಿನ ಘನತೆ ಗೌರವಗಳನ್ನು ಹೆಚ್ಚಿಸಿದ ಚಿಕ್ಕದೇವರಾಜ ಒಡೆಯರ ಅನಂತರ ಪಟ್ಟಕ್ಕೆ ಬಂದ ಕಂಠೀರವ ಒಡೆಯರು ಮೂಕರಾಗಿದ್ದರು.

ಅವರು ಸುಮಾರು ಒಂಬತ್ತು ವರ್ಷ ಕಾಲ ರಾಜ್ಯವಾಳಿದರು. ಅವರ ಆಳ್ವಿಕೆಯಲ್ಲಿ ಪ್ರಧಾನಿ ಲಿಂಗಣ್ಣಯ್ಯ, ದಳವಾಯಿ ವೀರರಾಜಯ್ಯ-ಈ ಇಬ್ಬರೂ ಸ್ವಾಮಿಭಕ್ತಿಯಿಂದ ಸೇವೆ ಸಲ್ಲಿಸಿದರು.

ಅನಂತರ, ಕಂಠೀರವ ಒಡೆಯರ ಕುಮಾರರಾದ ದೊಡ್ಡಕೃಷ್ಣರಾಜ ಒಡೆಯರು ಪಟ್ಟಾಭಿಷಿಕ್ತರಾದರು. ದಳವಾಯಿ ವೀರರಾಜಯ್ಯನ ಕಾಲಾನಂತರ ಆತನ ಮಗ ದೇವರಾಜಯ್ಯನೇ ದಳವಾಯಿಯಾದನು. ನಂಜರಾಜಯ್ಯನೆಂಬುವನು ಸರ್ವಾಧಿಕಾರಿಯಾದನು. ಆಗ ಆರ್ಕಾಟು ನವಾಬ ಸಾದುಲ್ಲಾಖಾನನು ಶ್ರೀರಂಗಪಟ್ಟಣವನ್ನು ಹಿಡಿಯಲು ಸಿದ್ಧೋಜಿ ಘೋರ್ಪಡೆ ಎಂಬ ಮರಾಠಿ ಸರದಾರನ ಕೈಕೆಳಗೆ ದೊಡ್ಡ ದಂಡನ್ನು ಕಳಿಸಿದನು. ಆ ಯುದ್ಧದಲ್ಲಿ ಮೈಸೂರಿಗೆ ಜಯವಾಯಿತು. ಒಡೆಯರು ತುಂಬ ರಸಿಕರಾಗಿದ್ದುದರಿಂದ ರಾಜಕಾರ್ಯಗಳನ್ನೆಲ್ಲ ಸರ್ವಾಧಿಕಾರಿ ನಂಜರಾಜಯ್ಯ, ದಳವಾಯಿ ದೇವರಾಜಯ್ಯ ಈ ಇಬ್ಬರಿಗೆ ವಹಿಸಿ ತಾವು ಸುಖಲೋಲುಪರಾಗಿದ್ದರು. ಇದರಿಂದ ಆ ಅಧಿಕಾರಿಗಳು ದಿನದಿನಕ್ಕೆ ಪ್ರಬಲರಾಗುತ್ತಲೇ ಬರುತ್ತಿದ್ದರು. ದೊಡ್ಡ ಕೃಷ್ಣರಾಜ ಒಡೆಯರು ಸುಮಾರು ಹದಿನೆಂಟು ವರ್ಷ ರಾಜ್ಯವಾಳಿದರು. ಅವರಿಗೆ ಗಂಡುಮಕ್ಕಳಿರಲಿಲ್ಲ. ಆದ್ದರಿಂದ ಅವರ ತರುವಾಯ ಅವರ ದತ್ತುಪುತ್ರರಾದ ಚಾಮರಾಜ ಒಡೆಯರಿಗೆ ಪಟ್ಟವಾಯಿತು. ದೊಡ್ಡ ಕೃಷ್ಣರಾಜ ಒಡೆಯರ ಪತ್ನಿ ದೇವಾಜಮ್ಮಣ್ಣಿಯವರ ಅನುಮತಿಯಂತೆ ದಳವಾಯಿ ದೇವರಾಜಯ್ಯ, ಸರ್ವಾಧಿಕಾರಿ ನಂಜರಾಜಯ್ಯ ಮತ್ತು ಕರಾಚೂರಿ ನಂಜರಾಜಯ್ಯ ಈ ಮೂವರು ರಾಜಕಾರ್ಯಗಳನ್ನು ನಡಸುತ್ತಿದ್ದರು. ಚಾಮರಾಜ ಒಡೆಯರ ಅಧಿಕಾರವೇನೂ ಸಾಗುತ್ತಿರಲಿಲ್ಲ.

ಈ ಮೂವರೂ ಪ್ರಭುಸೇವಾ ಪರಾಯಣರಾಗಿ ರಾಜ್ಯಕಾರ್ಯಗಳನ್ನು ನಿರ್ವಹಿಸಬಹುದಾಗಿತ್ತು. ಅವರು ರಾಜ್ಯದ ಹುಟ್ಟುವಳಿಯಲ್ಲಿ ಬಹುಭಾಗವನ್ನು ತಮ್ಮ ಸ್ವಂತಕ್ಕಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಅರಮನೆಗೆ ಸೇರಿದ ಅನೇಕ ತೋಟ, ಹೊಲ, ಗದ್ದೆಗಳನ್ನು ಅವರು ತಮ್ಮವೆಂದು ಹೇಳಿಕೊಂಡು ಅವುಗಳಿಂದ ಬರುತ್ತಿದ್ದ ಫಸಲನ್ನು ತಾವೇ ಅನುಭವಿಸುತ್ತಿದ್ದರು. ತಮಗೆ ಬೇಕಾದವರಿಗೆ ಅರಮನೆಯಲ್ಲಿಯೂ, ಸೈನ್ಯದಲ್ಲಿಯೂ ಮತ್ತು ರಾಜ್ಯದಲ್ಲಿಯೂ ನೌಕರಿಗಳನ್ನು ಕೊಟ್ಟು ತಮ್ಮ ಅನುಯಾಯಿಗಳನ್ನು ಹೆಚ್ಚಿಸಿ

ಕೊಂಡಿದ್ದರು. ಹೀಗೆ, ಅವರು ತಾವೇತಾವಾಗಿ ಆಡಳಿತ ಮಾಡುತ್ತಿದ್ದರು. ದೊರೆಗಳನ್ನು ಹೆಸರಿಗೆ ಮಾತ್ರ ಇಟ್ಟುಕೊಂಡಿದ್ದರು.

ಚಾಮರಾಜ ಒಡೆಯರು ಕಾರ್ಯದಕ್ಷರಾಗಿದ್ದುದರಿಂದ ರಾಜ್ಯಭಾರ ವನ್ನು ಚೆನ್ನಾಗಿ ನಿರ್ವಹಿಸುತ್ತಿದ್ದರು. ಅವರು ಅರಮನೆಯಲ್ಲಿ ನಡೆಯುತ್ತಿದ್ದ ಅನೇಕ ದುಂದುವೆಚ್ಚಗಳನ್ನು ನಿಲ್ಲಿಸಿಬಿಟ್ಟರು. ಆ ಮೂವರಿಗೆ ಅನುಕೂಲ ವಾಗಿದ್ದ ಅರಮನೆಯ ಊಳಿಗದವರನ್ನೆಲ್ಲ ಕೆಲಸದಿಂದ ತಪ್ಪಿಸಿಬಿಟ್ಟರು. ಇದರಿಂದ ಆ ಮೂರು ಜನರಿಗೆ ಕೈಕಟ್ಟಿದಂತಾಯಿತು. ಏನಾದರೂ ಮಾಡಿ ಒಡೆಯರನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಬೇಕೆಂದು ಅವರು ಹವಣಿಸು ತ್ತಿದ್ದರು.

ದಳವಾಯಿ ದೇವರಾಜಯ್ಯನು ಒಂದು ದಿನ ದೇವಾಜಮ್ಮಣ್ಣಿಯವರನ್ನು ಕಂಡು ಒಡೆಯರ ವಿಷಯವಾಗಿ ಇಲ್ಲದ ಸಲ್ಲದ ಮಾತುಗಳನ್ನು ಹೇಳಿದನು. ಒಡೆಯರಿಗೆ ದಳವಾಯಿಯ ಸಂಧಾನ ತಿಳಿಯಿತು. ಅವರು ಆ ಮೂವರನ್ನೂ ಅಧಿಕಾರದಿಂದ, ತಪ್ಪಿಸಿ, ಬೇರೆಯವರನ್ನು ಅವರವರ ಕೆಲಸಗಳಿಗೆ ನೇಮಕ ಮಾಡಿದರು. ಅಧಿಕಾರಿಗಳನ್ನು ನೀಗಿಕೊಂಡ ದಳವಾಯಿಯೂ ಅವನ ಸ್ನೇಹಿತರೂ ಒಡೆಯರ ಮೇಲೆ ದ್ವೇಷ ಸಾಧಿಸುತ್ತಿದ್ದರು. ಆಗ ಮೈಸೂರು ಸೈನ್ಯದಲ್ಲಿ ಹೈದರ್ ಅಲಿ ಜಮಾದಾರನಾಗಿದ್ದನು. ದೇವರಾಜಯ್ಯನಿಗೂ ಅವನಿಗೂ ಬಹಳ ಸ್ನೇಹವಿತ್ತು. ಅವನು ಹೈದರ್ ಆಲಿಯ ಮೂಲಕ ಇತರ ಸೇನಾನಾಯಕರನ್ನೂ ತನ್ನ ಕಡೆಗೆ ಒಲಿಸಿಕೊಂಡು ಅನೇಕರಿಗೆ ಯಥೇಚ್ಛವಾಗಿ ಲಂಚವನ್ನು ಕೊಟ್ಟು ಅವರ ಸಹಾಯವನ್ನು ಸಮಯವರಿತು ಉಪಯೋಗಿಸಿ ಕೊಳ್ಳಲು ಸಿದ್ಧನಾಗಿದ್ದನು.

ಶ್ರೀರಂಗಪಟ್ಟಣದ ಸೈನಿಕರು ಪ್ರತಿ ಶುಕ್ರವಾರವೂ ಕೋಟೆಯಿಂದ ಹೊರಗೆ ಹೋಗಿ ಕವಾಯಿತು ಮಾಡಿಕೊಂಡು ಬರುವ ಪದ್ಧತಿಯಿತ್ತು. ರಾಜಧಾನಿಯಿಂದ ಎರಡು ಹರಿದಾರಿ ದೂರದಲ್ಲಿ ಒಂದು ಮೈದಾನವಿತ್ತು. ಆ ಮೈದಾನಕ್ಕೆ ಸೈನ್ಯವೆಲ್ಲ ಹೋಗುತ್ತಿತ್ತು. ಒಂದು ಶುಕ್ರವಾರದ ದಿನ ಮೈಸೂರು ಸೈನ್ಯ ಕವಾಯತಿಗೆ ಹೋಗಿದ್ದಾಗ ದೇವರಾಜಯ್ಯನು ತಾನು ಮೊದಲೇ ಸಿದ್ಧಪಡಿಸಿಕೊಂಡಿದ್ದ ಜನರನ್ನು ಕರೆದುಕೊಂಡು ಕೋಟೆಯೊಳಕ್ಕೆ ಬಂದನು. ಕವಾಯತಿಗೆ ಹೋಗಿದ್ದ ಒಡೆಯರ ಸೈನ್ಯವು ಒಳಕ್ಕೆ ಬರದಂತೆ

ಕೋಟೆಯ ಬಾಗಿಲುಗಳನ್ನೆಲ್ಲ ಭದ್ರಪಡಿಸಿದನು. ಈ ಸಮಾಚಾರ ಒಡೆಯರಿಗೆ ತಿಳಿದು, ಅವರು ನಿರುಪಾಯರಾದರು. ಅವರ ಸೈನ್ಯವೆಲ್ಲ ಕೋಟೆಯ ಹೊರಗಿತ್ತು. ಪಿತೂರಿಗಾರರ ದಂಡು ಬಂದು ಅರಮನೆಯನ್ನು ಮುತ್ತಿತು. ಒಡೆಯರು ಬೋನಿನಲ್ಲಿ ಸಿಕ್ಕಿಬಿದ್ದ ಸಿಂಹದಂತಾದರು. ಅವರು ಕೂಡಲೇ ಅರಮನೆಯ ಬಾಗಿಲುಗಳನ್ನು ಹಾಕಿಸಿದರು. ಅಂತಃಪುರದ ಹೆಂಗಸರೂ ಮಕ್ಕಳೂ ಭಯಪಟ್ಟು ನಡುಗುತ್ತಿದ್ದರು. ದಳವಾಯಿಯು ಸೈನಿಕರನ್ನು ಅರಮನೆಯ ಸುತ್ತಲೂ ಕಾವಲಿಟ್ಟು 'ರಾಮಬಾಣ'ವೆಂಬ ಆನೆಯಿಂದ ಅರಮನೆಯ ಬಾಗಿಲನ್ನು ಮುರಿಸಿ ಒಳಗೆ ನುಗ್ಗಿದನು. ಒಡೆಯರು ಏನು ಮಾಡುವುದಕ್ಕೂ ತೋಚದೆ ನಿಂತುಬಿಟ್ಟರು. ಆ ಶತ್ರುವಿನ ಕೈವಶರಾದರು. ದಳವಾಯಿಯು ಒಡೆಯರಿಂದ ಶಿಖಾ ಮೋಹರನ್ನೂ ಪಟ್ಟದ ಕತ್ತಿಯನ್ನೂ ಕಿತ್ತುಕೊಂಡು ಅವರನ್ನು ಸಂಸಾರ ಸಮೇತ ಸೆರೆ ಹಿಡಿಸಿ ಕಬ್ಬಾಳದುರ್ಗಕ್ಕೆ ಕಳುಹಿಸಿದನು.

ತರುವಾಯ, ಮಹಾಮಾತೃಶ್ರೀ ದೇವಾಜಮ್ಮಣ್ಣಿಯವರಿಗೆ ದೇವ ರಾಜಯ್ಯನು ಮೂರು ವರ್ಷದ ಒಂದು ಮಗುವನ್ನು ದತ್ತು ಮಾಡಿಸಿದನು. ಆ ಮಗುವೇ ಇಮ್ಮಡಿ ಕೃಷ್ಣರಾಜ ಒಡೆಯರು. ಇದರಿಂದ ದಳವಾಯಿಯ ಅಧಿಕಾರಕ್ಕೆ ಚ್ಯುತಿಯಿಲ್ಲದಂತಾಯಿತು. ಆಡಳಿತವೆಲ್ಲ ಅವನ ಕೈಸೇರಿತು. ಹೀಗಿರಲು, ಸರ್ವಾಧಿಕಾರಿ ನಂಜರಾಜಯ್ಯನು ಕಾಲವಾದನು. ಆಗ ಕರಾಚೂರಿ ನಂಜರಾಜಯ್ಯನೇ ಮುಂದೆ ಸರ್ವಾಧಿಕಾರಿಯಾದನು. ಇಮ್ಮಡಿ ಕೃಷ್ಣರಾಜ ಒಡೆಯರು ಪ್ರಾಪ್ತ ವಯಸ್ಕರಾದರು. ಅವರಿಗೆ ಪಟ್ಟಾಭಿ ಷೇಕವೂ ಆಯಿತು. ಕರಾಚೂರಿ ನಂಜರಾಜಯ್ಯನು ತನ್ನ ಪುತ್ರಿ ಪುಟ್ಟಮ್ಮಣ್ಣಿ ಯವರನ್ನು ಒಡೆಯರಿಗೆ ಕೊಟ್ಟು ಮದುವೆ ಮಾಡಿದನು. ಇದರಿಂದ, ಅಣ್ಣ ತಮ್ಮಂದಿರಾದ ದಳವಾಯಿ ದೇವರಾಜಯ್ಯನೂ, ಕರಾಚೂರಿ ನಂಜರಾಜ ಯ್ಯನೂ ಸರ್ವ ಸ್ವತಂತ್ರರಾಗಿ ವರ್ತಿಸಲು ಅನುಕೂಲವಾಯಿತು. ಇಮ್ಮಡಿ ಕೃಷ್ಣರಾಜ ಒಡೆಯರು ಕೆಲವು ಕಾಲದ ಮೇಲೆ ಬೆಟ್ಟದ ಕೋಟೆ ಕತ್ತಿ ಗೋಪಾಲರಾಜೇ ಅರಸಿನವರ ಪುತ್ರಿ ಲಕ್ಷ್ಮಮ್ಮಣ್ಣಿಯವರನ್ನೂ ಮದುವೆ ಯಾದರು.

ಇಲ್ಲಿಗೆ ಒಂದು ಘಟ್ಟ. ಇಮ್ಮಡಿ ಕೃಷ್ಣರಾಜ ಒಡೆಯರು ಸರ್ವ ಸಮರ್ಥರಾಗಿ ರಾಜ್ಯವಾಳುತ್ತಿದ್ದರು. ಅವರು ದೇವರಾಜಯ್ಯನನ್ನೂ ಕರಾಚೂರಿ ನಂಜರಾಜಯ್ಯನನ್ನೂ ಕೆಲಸದಿಂದ ತೆಕೆದುಹಾಕಬೇಕೆಂದು ಯೋಚಿಸಿದರು. ಆ ದಳವಾಯಿ ಸಹೋದರರಿಬ್ಬರೂ ತಮ್ಮ ಅಧಿಕಾರ ಚ್ಯುತಿಯನ್ನು ಸಹಿಸಲಾರದವರಾಗಿದ್ದರು. ಅವರು ಒಡೆಯರನ್ನು ಸಿಂಹಾಸನದಿಂದ ತಳ್ಳಲು ಪಿತೂರಿ ಮಾಡುತ್ತಿದ್ದರು. ಒಡೆಯರ ಕಿರಿಯರಾಣಿ ಲಕ್ಷ್ಮಮ್ಮಣ್ಣಿಯವರು ಈ ರಾಜಕೀಯ ರಂಗದ ಚಲನ ವಲನಗಳನ್ನು ಕುತೂಹಲದಿಂದ ಅರಿತುಕೊಳ್ಳುತ್ತಿದ್ದರು. ಅವರ ತಂದೆ ಕತ್ತಿ ಗೋಪಾಲರಾಜೇ ಅರಸಿನವರು ಈ ರಾಜಕೀಯ ವಿಚಾರಗಳನ್ನು ಆಗಾಗ ಮಗಳಿಗೆ ತಿಳಿಸುತ್ತಿದ್ದುದರಿಂದ ಅವರು ಆಗಿನ ಪ್ರಮುಖ ಅಧಿಕಾರಿಗಳಲ್ಲಿ ಯಾರು ಯಾರು ಯಾವ ಯಾವ ಮನೋಭಾವದಿಂದ ವರ್ತಿಸುತ್ತಿದ್ದರೆಂಬುದನ್ನು ಅರಿತಿದ್ದರು.

ಇಮ್ಮಡಿ ಕೃಷ್ಣರಾಜ ಒಡೆಯರನ್ನು ಎದುರಿಸಲು ಕರಾಚೂರಿ ನಂಜರಾಜಯ್ಯನು ಮುಂದೆ ಬಂದನು. ಅವನು ತನ್ನ ಹೆಣ್ಣುಮಗಳ ಸೌಭಾಗ್ಯವನ್ನೂ ಗಮನಿಸದೆ ಒಡೆಯರ ಮೇಲೆ ಕೈಮಾಡಬೇಕೆಂದು ನಿರ್ಧರಿಸಿದನು. ಅವನಿಗೆ ಒಂದು ಒಳ್ಳೆಯ ಸಮಯವೂ ಸಿಕ್ಕಿತು. ಶ್ರೀರಂಗಪಟ್ಟಣದ ಸೈನ್ಯವೆಲ್ಲ ದಿಂಡಿಗಲ್ಲು ಪ್ರಾಂತಕ್ಕೆ ಹೋಗಿತ್ತು. ಹೈದರನು ಆ ಸೈನ್ಯದ ನಾಯಕನಾಗಿದ್ದನು. ಇಂಥ ಸಮಯದಲ್ಲಿ ಕರಾಚೂರಿಯು ತನ್ನ ಕಡೆಯ ಜನರನ್ನು ಅರಮನೆಯ ಸುತ್ತಲೂ ಕಾವಲಿಟ್ಟು ಅರಮನೆಯ ಬಾಗಿಲಿಗೆ ನಾಲ್ಕು ಫಿರಂಗಿಗಳನ್ನು ಎತ್ತಿಕಟ್ಟಿ ಗುಂಡು ಹೊಡೆಯಿಸಿದನು. ಆಗ ದೊರೆಗಳು ಬೆಚ್ಚಿ ಬಿದ್ದು ಅರೆಕ್ಷಣದಲ್ಲಿ ವಿಚಾರವನ್ನು ತಿಳಿದರು. ಕೂಡಲೇ, ಒಡೆಯರು ಕತ್ತಿಯನ್ನು ಹಿಡಿದು ಅರಮನೆಯಿಂದ ಹೊರಗೆ ಬಂದು ನಂಜರಾಜಯ್ಯನ ಕಡೆಯವರನ್ನು ಹೊಡೆದೋಡಿಸಿದರು. ಅನೇಕರನ್ನು ಕತ್ತರಿಸಿಹಾಕಿಬಿಟ್ಟರು. ಕೆಲವರಿಗೆ ಕಿವಿಮೂಗುಗಳನ್ನು ಕೊಯಿದು ಅವಮಾನ ಮಾಡಿದರು. ನಂಜರಾಜಯ್ಯನು ಕಾಲಿಗೆ ಬುದ್ಧಿ ಹೇಳಿದನು. ದೇವರಾಜಯ್ಯನಿಗೆ ಈ ವಿಚಾರ ತಿಳಿದು ಅವನು ಯಾರಿಗೂ ತಿಳಿಯದಂತೆ ಪಟ್ಟಣದಿಂದ ಓಡಿಹೋದನು. ಒಡೆಯರು ನಂಜರಾಜಯ್ಯನನ್ನು ಹಿಡಿತರಿಸಿ ಮರಣದಂಡನೆಗೆ ಗುರಿಮಾಡಬೇಕೆಂದು ಆಜ್ಞೆ ಮಾಡಿದರು. ಆದರೆ ಮಹಾರಾಣಿ ಪುಟ್ಟಮ್ಮಣ್ಣಿಯವರು ತಮ್ಮ ತಂದೆಯ

ತಪ್ಪನ್ನು ಕ್ಷಮಿಸಿ ಕಾಪಾಡಬೇಕೆಂದು ಒಡೆಯರನ್ನು ಪ್ರಾರ್ಥಿಸಿಕೊಂಡುದುದ ರಿಂದ, ಅವರು ಅವನನ್ನು ಮನ್ನಿಸಿದರು. ಅಲ್ಲದೆ ಅವನಿಗೆ ಜೀವಾಂಶವನ್ನು ಕೊಟ್ಟು ಕೊಣನೂರಿನಲ್ಲಿರಿಸಿದರು.

ದೇವರಾಜಯ್ಯನೂ ನಂಜರಾಜಯ್ಯನೂ ಮತ್ತು ಕರಾಚೂರಿ ನಂಜ ರಾಜಯ್ಯನೂ ರಾಜ್ಯಾಡಳಿತಗಳಲ್ಲಿ ತಮ್ಮ ಕೈವಾಡವನ್ನು ತೋರಿಸುತ್ತ ಪ್ರಮುಖರಾಗಿದ್ದಾಗಲೇ, ಹೈದರ್ ಆಲಿಯೂ ಯೋಧನಾಗಿ ದಿನದಿನಕ್ಕೆ ಪ್ರಬಲನಾಗುತ್ತಿದ್ದನು. ಲಕ್ಷ್ಮಮ್ಮಣ್ಣಿಯವರ ರಾಜಕೀಯ ಜೀವನದ ಸಂಪೂರ್ಣ ಪರಿಚಯವಾಗಬೇಕಾದರೆ ಹೈದರ್ ಆಲಿಯ ಜೀವನ ಚರಿತ್ರೆ ಯನ್ನು ಸ್ವಲ್ಪಮಟ್ಟಿಗೆ ತಿಳಿಯುವುದು ಅವಶ್ಯಕ.

ಹೈದರ್ ಆಲಿಯ ವಂಶಜರು ಖುರೈಷೀ ಪಂಗಡದವರು. ಮುಹಮ್ಮದೀ ಯರ ಗುರು ಮುಹಮದ್ ಪೈಗಂಬರನಿಗಿಂತಲೂ ಹಿಂದೆ ಹೈದರ್ ಆಲಿಯ ಹಿರಿಯರು ಮಕ್ಕಾ ಮಸೀದಿಯಲ್ಲಿ ಧರ್ಮಾಧಿಕಾರಿಯಾಗಿದ್ದರಂತೆ. ಅವರ ಕುಟುಂಬದವರು ಕಾರಣಾಂತರಗಳಿಂದ ಹಿಂದೂಸ್ಥಾನಕ್ಕೆ ಬಂದರು. ಮಹ ಮ್ಮದ್ ಭಿಲಾಲ್ ಎಂಬುವನೇ ಹೈದರಾಲಿಯ ಮನೆತನದ ಮೂಲಪುರುಷ. ಆತನು ಪಂಜಾಬ್ ದೇಶದಲ್ಲಿ ಬಹಳ ಕಾಲ ನೆಲಸಿದ್ದು, ಆ ತರುವಾಯ ಸಂಸಾರಸಮೇತನಾಗಿ ಹೊರಟುಬಂದು ಈಗಿನ ಗುಲ್‌ಬರ್ಗ ಪ್ರಾಂತದಲ್ಲಿರುವ ಆಲಂದವೆಂಬ ಗ್ರಾಮದಲ್ಲಿ ಒಕ್ಕಲಿದ್ದನು. ಮುಹಮ್ಮದ್ ಭಿಲಾಲ್ ಬಹಳ ಆಚಾರವಂತ: ಕುಲಶೀಲ ಸಂಪನ್ನ. ಈತನಿಗೆ ಇಬ್ಬರು ಗಂಡುಮಕ್ಕಳಿದ್ದರು. ಹಿರಿಯ ಮಗನ ಹೆಸರು ಮುಹಮುದ್ ಆಲಿ; ಕಿರಿಯ ಮಗನ ಹೆಸರು ಮುಹಮುದ್ ವಲಿ. ಇವರಿಬ್ಬರೂ ದೊಡ್ಡವರಾದಮೇಲೆ ಭಿಲಾಲನು ಅವರಿಗೆ ಮದುವೆ ಮಾಡಿದನು. ಅವರ ಕುಟುಂಬ ದೊಡ್ಡದಾಯಿತು. ಆಗ ಆ ಇಬ್ಬರು ಸಹೋದರರೂ ಜೀವನೋಪಾಯವನ್ನು ಹುಡುಕಿಕೊಂಡು ಸಂಸಾರ ಸಮೇತ ಮೈಸೂರು ನಾಡಿಗೆ ಬಂದರು. ಆಗ ಸೀರ್ಯದ ಸೀಮೆ ಮುಹಮ್ಮದೀಯರ ಆಳ್ವಿಕೆಯಲ್ಲಿತ್ತು. ಅವರು ಸೀರ್ಯದ ನವಾಬನಲ್ಲಿ ನೌಕರಿಗೆ ಸೇರಿದರು. ಕೆಲವು ಕಾಲದ ಮೇಲೆ ಮುಹಮುದ್ ಆಲಿಗೆ ಪತ್ತೆ ಮುಹಮುದ್ ಎಂಬ ಮಗ ನಾದನು. ಕಾಲಕ್ರಮದಲ್ಲಿ ಅವನಿಗೆ ಇನ್ನೂ ಇಬ್ಬರು ಗಂಡು ಮಕ್ಕಳು

ಹುಟ್ಟಿದರು. ಅವರಲ್ಲಿ ಒಬ್ಬನ ಹೆಸರು ಗುಲಾಂ ಹೈದರಲ್ಲಿ; ಇನ್ನೊಬ್ಬನ
ಹೆಸರು ಗುಲಾಂ ಅಲ್ಲಿ.

ಕೆಲವು ಕಾಲಾನಂತರ ಮಹಮದ್ ಆಲಿಯೂ ಮಹಮ್ಮದ್‌ವಲಿಯೂ
ಸೀರ್ಯವನ್ನು ಬಿಟ್ಟು ಕೋಲಾರಕ್ಕೆ ಹೋಗಿ ನಿಂತರು. ಅಲ್ಲಿ ಮಹಮದ್
ಆಲಿಯು ಕಾಲವಾದನು. ತಂದೆಯು ಕಾಲವಾದಾಗ ಫತ್ತೆ ಮಹಮದ್
ಇನ್ನೂ ಚಿಕ್ಕವನಾಗಿದ್ದನು. ಚಿಕ್ಕಪ್ಪನಾದ ಮಹಮದ್ ವಲಿಯು ತನ್ನ
ಅಣ್ಣನ ಹೆಂಡತಿಯನ್ನೂ ಮಕ್ಕಳನ್ನೂ ಮನೆಯಿಂದ ಓಡಿಸಿದನು. ಅವರಿಗೆ
ಆಗ ಕೋಲಾರದಲ್ಲಿದ್ದ ಸೈನ್ಯದ ಅಧಿಕಾರಿಯೊಬ್ಬನು ಆಶ್ರಯವಿತ್ತನು. ಫತ್ತೆ
ಮಹಮ್ಮದನು ದೊಡ್ಡವನಾದಮೇಲೆ ಆ ಅಧಿಕಾರಿಯು ಸೈನ್ಯದಲ್ಲಿ ಅವನಿಗೆ
ನೌಕರಿಯನ್ನು ಕೊಟ್ಟನು. ಆ ಕಾಲದಲ್ಲಿ ಸೀರ್ಯದ ನವಾಬನಿಗೂ ಗಂಜಿ
ಕೋಟೆ ಪಾಳೆಯಗಾರನಿಗೂ ಯುದ್ಧವಾಯಿತು. ಆ ಯುದ್ಧದಲ್ಲಿ ಫತ್ತೆ
ಮಹಮ್ಮದನು ಸಾಹಸದಿಂದ ಹೋರಾಡಿದನು. ಪಾಳೆಯಗಾರನು ಸೋತು
ಹೋದನು. ತರುವಾಯ ಫತ್ತೆ ಮಹಮ್ಮದನು ಸೀರ್ಯದ ಸುಭೇದಾರನ
ಪ್ರೀತಿ ಗೌರವಗಳಿಗೆ ಪಾತ್ರನಾದನು. ಅವನಿಗೆ ಗುಮ್ಮನಹಳ್ಳಿ ಎಂಬ ಗ್ರಾಮ
ಜಹಗೀರಾಗಿ ಬಂತು. ಅವನು ಸೈನ್ಯದಲ್ಲಿ ನಾಯಕನಾದನು. ಫತ್ತೇ
ನಾಯಕನ ಹಿರಿಯ ತಮ್ಮ ಗುಲಾಂ ಹೈದರಲಿಯು ಮಧುಗಿರಿಯಲ್ಲಿ ಅಧಿಕಾರಿ
ಯಾಗಿದ್ದ ಮಲ್ಲರಾಜಯ್ಯನ ಹತ್ತಿರ ಕೆಲಸಕ್ಕೆ ಸೇರಿಕೊಂಡನು. ಕಿರಿಯ
ತಮ್ಮ ಗುಲಾಂ ಅಲ್ಲಿಯು ದೊಡ್ಡಬಳ್ಳಾಪುರದ ನವಾಬನ ಬಳಿಯಲ್ಲಿ ಕಿಲ್ಲೇ
ದಾರನಾದನು.

ಫತ್ತೆ ಮಹಮ್ಮದನಿಗೆ ಮೂರು ಮಂದಿ ಹೆಂಡತಿಯರಿದ್ದರು. ಅವರಲ್ಲಿ
ಕಿರಿಯಳ ಹೊಟ್ಟೆಯಲ್ಲಿ ಇಬ್ಬರು ಗಂಡುಮಕ್ಕಳು ಹುಟ್ಟಿದರು. ದೊಡ್ಡ ಮಗನ
ಹೆಸರು ಷಾಬಾಸ್ ಆಲಿ ಖಾನ್. ಚಿಕ್ಕವನ ಹೆಸರು ಹೈದರ್ ಆಲಿ.

ತಂದೆಯು ಕಾಲವಾದಾಗ ಹೈದರನು ಏಳು ವರ್ಷದ ಹುಡುಗನಾಗಿದ್ದನು.
ಸಂಸಾರಕ್ಕೆ ಯಾರೂ ದಿಕ್ಕಿಲ್ಲದಂತಾಯಿತು. ಆಗ ಹೈದರನ ತಾಯಿಯ ಅಣ್ಣ
ಇಬ್ರಾಹಿಂ ಖಾನ್ ಎಂಬುವನು ಬೆಂಗಳೂರಲ್ಲಿದ್ದ ಮೈಸೂರು ಅರಸರ ಕಡೆಯ
ಅಧಿಕಾರಿಯಾಗಿದ್ದ ಕತ್ತೀ ಗೋಪಾಲರಾಜ ಅರಸಿನ ಬಳಿಯಲ್ಲಿ ನೌಕರಿ
ಯಲ್ಲಿದ್ದನು. ಇವರು ಆಗ ಬೆಂಗಳೂರಿಗೆ ಬಂದು ನಿಂತರು. ಸೀರ್ಯದ

ನವಾಬನ ಮಗನಾದ ಅಬ್ಬಾಸ್ ಖುಲಿ ಖಾ಼ ಎಂಬುವನು ಹೈದರನ ತಾಯಿಯನ್ನು ಚಿತ್ರಹಿಂಸೆ ಮಾಡಿಸಿದನು. ಅವಳ ಗಂಡನು ತನ್ನ ತಂದೆಗೆ ಕೊಡಬೇಕಾಗಿದ್ದ ಹಣವನ್ನು ತೀರಿಸಬೇಕೆಂದೇ ಈ ಚಿತ್ರಹಿಂಸೆ. ಅವನು ಈ ಸಂಸಾರವನ್ನು ಕೈಸೆರೆ ಹಿಡಿಸಿ ದೊಡ್ಡಬಳ್ಳಾಪುರದಲ್ಲಿರಿಸಿದನು. ಆಗ ಮೈಸೂರು ಪ್ರಭು ಇಮ್ಮಡಿ ಕೃಷ್ಣರಾಜ ಒಡೆಯರು. ಇಬ್ರಾಹಿಂ ಖಾ಼ ತನ್ನ ತಂಗಿಯ ಮತ್ತು ಅವಳ ಮಕ್ಕಳ ದುರವಸ್ಥೆಯನ್ನು ಕತ್ತೀ ಗೋಪಾಲರಾಜ ಅರಸಿನಲ್ಲಿ ಹೇಳಿಕೊಂಡು ಅವರಿಗೆ ಸಹಾಯ ಮಾಡಬೇಕೆಂದು ಆಲೋಚಿಸಿದನು. ಅದರಂತೆ, ಆತನು ಮೈಸೂರು ಒಡೆಯರಿಗೆ ಪತ್ರ ಬರೆದು, ಹೈದರ್ ಆಲಿಯನ್ನು ನೌಕರಿಗೆ ಸೇರಿಸಿಕೊಂಡು, ಅವರು ತೆರಬೇಕಾಗಿದ್ದ ಸಾಲವನ್ನು ತೀರಿಸಿದರು. ಹೈದರನಿಗೆ ಕಷ್ಟಕಾಲದಲ್ಲಿ ಸಹಾಯ ಮಾಡಿದವರು ಕತ್ತೀ ಗೋಪಾಲರಾಜ ಅರಸು ಮತ್ತು ಇಮ್ಮಡಿ ಶ್ರೀ ಕೃಷ್ಣರಾಜ ಒಡೆಯರು. ಲಕ್ಷ್ಮಮ್ಮಣ್ಣಿಯವರು ಕತ್ತೀ ಗೋಪಾಲರಾಜ ಅರಸಿನ ಮಗಳೆಂಬುದನ್ನೂ ಇಮ್ಮಡಿ ಶ್ರೀ ಕೃಷ್ಣರಾಜ ಒಡೆಯರ ಪತ್ನಿಯೆಂಬುದನ್ನೂ ಹಿಂದೆಯೇ ಹೇಳಿದ್ದೇವೆ!

ಮೈಸೂರಿನವರಿಗೂ ದೇವನಹಳ್ಳಿ ಪಾಳೆಯಗಾರನಿಗೂ ನಡೆದ ಯುದ್ಧದಲ್ಲಿ ಮೈಸೂರು ಸೈನ್ಯ ಹಿಮ್ಮೆಟ್ಟಿತು. ಆಗ ಹೈದರ್ ಆಲಿಯು ಸಾಹಸದಿಂದ ತನ್ನ ಸೈನ್ಯವನ್ನು ನಡಸುತ್ತ, ಸೈನಿಕರನ್ನು ಹುರಿದುಂಬಿಸಿ, ಪಾಳೆಯಗಾರನ ಸೈನ್ಯದ ಮೇಲೆ ಬಿದ್ದು ಯುದ್ಧ ಮಾಡಿದನು. ಕತ್ತೀ ಗೋಪಾಲರಾಜ ಅರಸೂ, ಕರಾಚೂರಿ ನಂಜರಾಜಯ್ಯನೂ ಹೈದರನ ಪರಾಕ್ರಮವನ್ನು ಕಂಡು ಬೆರಗಾದರು. ಆಗ ಮೈಸೂರಿಗೆ ಜಯವಾಯಿತು. ಹೈದರನು ಇಮ್ಮಡಿ ಕೃಷ್ಣರಾಜ ಒಡೆಯರ ಪ್ರೀತಿ ಗೌರವಗಳಿಗೆ ಪಾತ್ರನಾದನು. ಅವನು ದೇವನಹಳ್ಳಿಯಲ್ಲಿ ಕಿಲ್ಲೇದಾರನಾದನು. ಅವನು ಸೈನ್ಯಕ್ಕೆ ಹೊಸದಾಗಿ ಜನಗಳನ್ನು ಸೇರಿಸಿಕೊಳ್ಳುವ ಅಧಿಕಾರವನ್ನೂ ಹೊಂದಿದ್ದನು. ಅವನು ದೇವನಹಳ್ಳಿಯಲ್ಲಿದ್ದಾಗಲೇ ಅವನಿಗೆ ಸೈಯದಾನಿ ಬೇಗಂ ಎಂಬುವಳೊಂದಿಗೆ ಮದುವೆಯಾಯಿತು. ಟೀಪೂಸುಲ್ತಾನನು ಹುಟ್ಟಿದುದು ಇಲ್ಲಿಯೇ. ಹೈದರನು ದಿನದಿನಕ್ಕೆ ಪ್ರಬಲನಾಗುತ್ತ ಬರುತ್ತಿದ್ದನು.

ಹೈದರನು ದಳವಾಯಿ ಸಹೋದರರ ಕಾರ್ಯಗಳನ್ನೆಲ್ಲ ಗಮನಿಸುತ್ತಲೇ ಇದ್ದನು. ಹೀಗಿರುವಲ್ಲಿ ದೆಹಲಿಯ ದಂಡು ನಾಸಿರ್‌ಜಂಗ್ ಎಂಬ ಸೇನಾ

ನಾಯಕನ ಕೈಕೆಳಗೆ ಹೊರಟು ಬಂದು ಆರ್ಕಾಟನ್ನು ಮುತ್ತಿತು. ಆಗ ಅವನು ಇಮ್ಮಡಿ ಕೃಷ್ಣರಾಜ ಒಡೆಯರ ಸಹಾಯವನ್ನೂ ಕೋರಿದರು. ಆಗ ಮೈಸೂರು ದಂಡು ಹೈದರ್ ಆಲಿ ಮತ್ತು ಬರಕ್ಕಿ ವೆಂಕಟರಾವ್ ಎಂಬ ನಾಯಕರ ನೇತೃತ್ವದಲ್ಲಿ ನಾಸಿರ್‌ಜಂಗನ ಸಹಾಯಕ್ಕೆ ಹೊರಟಿತು. ಆ ಯುದ್ಧದಲ್ಲಿ ದೆಹಲಿಗೆ ಜಯವಾಯಿತಾದರೂ, ನಾಸಿರ್‌ಜಂಗನು ಹತನಾದನು. ಆ ಸಮಯದಲ್ಲಿ ಹೈದರನಿಗೆ ೧೫ ಒಂಟೆಗಳ ಮೇಲೆ ಹಾಕಿದ್ದ ಅಕ್ಬರ್ ಷಾಹಿ ಮೊಹರುಗಳು ಸಿಕ್ಕಿದುವು. ಅಷ್ಟು ಹಣವನ್ನೂ ಅವನು ದೇವನಹಳ್ಳಿಗೆ ಸಾಗಿಸಿದನು. ದಳವಾಯಿ ದೇವರಾಜಯ್ಯನು ಆ ಹಣವೆಲ್ಲ ತನಗೆ ಬರ ಬೇಕೆಂದು ಹೇಳಿದನು. ಆದರೆ ಹೈದರನು ಅವನ ಮಾತಿಗೆ ಒಪ್ಪದೆ, ಆ ದ್ರವ್ಯವನ್ನೆಲ್ಲ ಒಡೆಯರಿಗೆ ಒಪ್ಪಿಸಿದನು. ಒಡೆಯರು ಅವನ ಸ್ವಾಮಿಭಕ್ತಿಗೆ ಮೆಚ್ಚಿ, ಮೂರು ಹೇರು ಮೊಹರುಗಳನ್ನೂ, ಆ ಯುದ್ಧದಲ್ಲಿ ಸೆರೆ ಸಿಕ್ಕಿದ್ಧ ೫೦೦ ಕುದುರೆಗಳನ್ನೂ, ೪೦೦ ಬಂದೂಕಗಳನ್ನು ಅವನಿಗೆ ಕೊಟ್ಟರು.

ಆ ಕಾಲದಲ್ಲಿ ಇಂಗ್ಲಿಷರೂ ಫ್ರೆಂಚ್ ದೇಶೀಯರೂ ಇಂಡಿಯಾ ದೇಶಕ್ಕೆ ಬಂದು ರಾಜ್ಯ ಕಟ್ಟುವ ಕಾರ್ಯದಲ್ಲಿ ನಿರತರಾಗಿದ್ದರು. ಆಗ ತಿರುಚನಾ ಪಳ್ಳಿಯ ಮಹಮದ್ ಆಲಿಯು ಇಂಗ್ಲಿಷರ ಸಹಾಯದಿಂದ ಆರ್ಕಾಟಿನ ಚಂದಾ ಸಾಹೇಬನಮೇಲೆ ಯುದ್ಧ ಹೂಡಿದ್ದನು. ಫ್ರೆಂಚರು ಆರ್ಕಾಟಿನ ಕಡೆಗೆ ನಿಂತಿದ್ದರು. ಮಹಮದ್ ಆಲಿಯು ಮೈಸೂರು ಸೈನ್ಯ ಸಹಾಯವನ್ನು ಕೋರಿದನು. ಯುದ್ಧದಲ್ಲಿ ಜಯವಾದರೆ ತಿರುಚನಾಪಳ್ಳಿಯನ್ನು ಮೈಸೂರಿಗೆ ಬಿಟ್ಟುಕೊಡುವುದಾಗಿ ಒಪ್ಪಿದ್ದನು. ಹೈದರ್ ಆಲಿಯು ಒಡೆಯರ ಅಪ್ಪಣೆ ಯಂತೆ ಮಹಮದ್ ಆಲಿಯ ಸಹಾಯಕ್ಕೆ ಹೋದನು. ಯುದ್ಧದಲ್ಲಿ ತಿರುಚನಾಪಳ್ಳಿಯವರಿಗೆ ಜಯವಾಯಿತು. ಮಹಮದ್ ಆಲಿಯು ತನ್ನ ಮಾತಿನಂತೆ ನಡೆಯಲಿಲ್ಲ. ಇಂಗ್ಲಿಷರೂ ಈ ವಿಚಾರದಲ್ಲಿ ಹೈದರನಿಗೆ ಸಹಾಯ ಮಾಡಲಿಲ್ಲ. ಅಂದಿನಿಂದಲೂ ಅವನು ಇಂಗ್ಲಿಷರನ್ನು ದ್ವೇಷಿಸಲಾರಂಭಿಸಿ ದನು. ಆ ಯುದ್ಧದಲ್ಲಿ ಹೈದರ್ ಆಲಿಯು ತೋರಿಸಿದ ಸಾಹಸಕ್ಕೆ ಮೆಚ್ಚಿ ಒಡೆಯರು ಅವನಿಗೆ "ಬಹದ್ದೂರ್" ಎಂಬ ಬಿರುದನ್ನು ಕೊಟ್ಟರು. ಅವನಿಗೆ ದಿಂಡಿಗಲ್ಲು ಫೌಜುದಾರಿಯೂ ಸಿಕ್ಕಿತು.

ಹೈದರಾಲಿಯು ಪಿಂಡಾರಿಯವರನ್ನೂ ಬೇಡರನ್ನೂ ಹೆಚ್ಚುಹೆಚ್ಚಾಗಿ ಸೈನ್ಯಕ್ಕೆ ಸೇರಿಸಿಕೊಂಡು ಸುತ್ತಮುತ್ತಣ ಪ್ರಾಂತಗಳನ್ನು ಕೊಳ್ಳೆ ಹೊಡೆಯುತ್ತ ಅಪಾರ ದ್ರವ್ಯವನ್ನು ಸಂಪಾದಿಸಿದನು. ತನ್ನ ವಹಿವಾಟಿನ ಲೆಕ್ಕವನ್ನಿಡಲು ಖಂಡೇರಾಯನೆಂಬ ಬ್ರಾಹ್ಮಣ ಮುತ್ಸದ್ದಿಯನ್ನು ನೇಮಿಸಿಕೊಂಡಿದ್ದನು. ಅವನು ಖಂಡೇರಾಯನನ್ನು ಶ್ರೀರಂಗಪಟ್ಟಣದಲ್ಲಿರಿಸಿ, ಅಲ್ಲಿ ನಡೆಯುತ್ತಿದ್ದ ವಿದ್ಯಮಾನಗಳನ್ನು ಆಗಾಗ ತಿಳಿದುಕೊಳ್ಳುತ್ತಿದ್ದನು. ಒಮ್ಮೆ ಶ್ರೀರಂಗಪಟ್ಟಣದ ಸೈನಿಕರು ತಮಗೆ ಸಂಬಳ ಸಾರಿಗೆ ಸರಿಯಾಗಿ ಬಟವಾಡೆಯಾಗುತ್ತಿಲ್ಲವೆಂದು ಮುಷ್ಕರ ಹಿಡಿದರು. ಹೈದರ್ ಆಲಿಯು ಒಡೆಯರ ಅಪ್ಪಣೆಯಂತೆ ಸೈನಿಕರನ್ನು ನಯಭಯಗಳಿಂದ ಸಮಾಧಾನಗೊಳಿಸಿದನು. ಮರಾಟೆಯವರು ಶ್ರೀರಂಗಪಟ್ಟಣದ ಮೇಲೆ ದಂಡೆತ್ತಿ ಬಂದರು. ಅವರನ್ನು ಎದುರಿಸಿ ಓಡಿಸಿಬಿಟ್ಟನು. ಅಷ್ಟು ಹೊತ್ತಿಗೆ ದಳವಾಯಿ ಸಹೋದರರು ತಮ್ಮ ವರ್ಚಸ್ಸನ್ನು ನೀಗಿಕೊಂಡಿದ್ದರು. ಒಡೆಯರು ಹೈದರನನ್ನು ದಳವಾಯಿತನಕ್ಕೆ ನೇಮಿಸಿದರು. ಖಂಡೇರಾಯನು ಪ್ರಧಾನಿಯಾದನು.

ಹೈದರನ ಮಾರ್ಗದಲ್ಲಿ ಅಡ್ಡಲಾಗಿ ನಿಂತಿದ್ದ ದಳವಾಯಿ ಸಹೋದರರು ಜಾರಿಬಿದ್ದರು. ರಾಜ್ಯದ ಭಂಡಾರ ಬರಿದಾಗಿತ್ತು. ಒಡೆಯರು ಸಮರ್ಥನಾದ ಹೈದರನನ್ನು ಬಿಟ್ಟು ರಾಜ್ಯಾಡಳಿತಗಳನ್ನು ನಿರ್ವಹಿಸಲು ಸಾಧ್ಯವಿರಲಿಲ್ಲ. ಹೈದರನ ಪುರೋಭಿವೃದ್ಧಿಗೆ ಅವಕಾಶ ಸಿಕ್ಕಿತು. ಅವನು ಸಂಸಾರ ಸಮೇತ ಶ್ರೀರಂಗಪಟ್ಟಣದಲ್ಲಿ ನಿಂತನು. ಇಮ್ಮಡಿ ಕೃಷ್ಣರಾಜ ಒಡೆಯರಿಗೆ ಕೊಟ್ಟಿದ್ದ ನಂಜರಾಜಯ್ಯನ ಪುತ್ರಿ ಪುಟ್ಟಮ್ಮಣ್ಣಿಯವರು ಕಾಲವಾದರು. ಆಗ ಒಡೆಯರ ಕಿರಿಯ ಹೆಂಡತಿಯಾಗಿದ್ದ ಲಕ್ಷ್ಮಮ್ಮಣ್ಣಿಯವರೇ ಮಹಾರಾಣಿಯಾದರು.

ಖಂಡೇರಾಯನು ಹೈದರನಿಗೆ ದ್ರೋಹಚಿಂತನೆ ಮಾಡಿದ್ದರಿಂದ ಹೈದರನು ಅವನನ್ನು ಉಪಾಯಾಂತರದಿಂದ ಕೈಸೆರೆ ಹಿಡಿಸಿ, ಪಂಜರದಲ್ಲಿಟ್ಟು ಗಿಣಿಯನ್ನು ಸಾಕುವಂತೆ ಖಂಡೇರಾಯನನ್ನು ಸಾಕಬೇಕೆಂದು ಹೇಳಿ ಪಂಜರವನ್ನು ಬೆಂಗಳೂರಿಗೆ ಕಳುಹಿಸಿದನು. ತನ್ನ ಮೇಲೆ ಆಗಾಗ ಬೀಳುತ್ತಿದ್ದ ಮರಾಟೆಯವರನ್ನು ಹಣ್ಣುಮಾಡಿದನು. ಇಂಗ್ಲಿಷರನ್ನು ಸಾಹಸದಿಂದ ಎದುರಿಸಿ ಕಾದಾಡುತ್ತಿದ್ದನು. ಫ್ರೆಂಚ್ ಸರ್ಕಾರದೊಂದಿಗೆ ಸ್ನೇಹವಾಗಿದ್ದನು. ಹೈದರನು ಕಡೆಯವರೆಗೂ ಇಂಗ್ಲಿಷರಿಗೆ ಶತ್ರುವಾಗಿಯೇ ನಿಂತನು. ಒಡೆಯರು

ಹೈದರನನ್ನು ಸರ್ವಾಧಿಕಾರಿಯಾಗಿರುವಂತೆ ನೇಮಕಮಾಡಿದನು. ಇಮ್ಮಡಿ ಕೃಷ್ಣರಾಜ ಒಡೆಯರು ಕಾಲವಾದಮೇಲೆ ಹೈದರನೇ ಸರ್ವತಂತ್ರ ಸ್ವತಂತ್ರನಾಗಿ ವರ್ತಿಸುತ್ತಿದ್ದನು. ಮೈಸೂರು ರಾಜವಂಶ ಹೆಸರಿಗೆ ಮಾತ್ರ ಇತ್ತು. ಇಂಥ ಪರಿಸ್ಥಿತಿಯಿಂದ ಮೈಸೂರು ಪ್ರಭು ವಂಶವನ್ನು ತಪ್ಪಿಸಿ, ಹೈದರನ ಪ್ರಾಬಲ್ಯವನ್ನು ಮುರಿಯಬೇಕೆಂದು ಲಕ್ಷ್ಮಮ್ಮಣ್ಣಿಯವರು ಸದಾ ಚಿಂತಿಸುತ್ತಿದ್ದರು. ರಾಜವಂಶದ ಕಷ್ಟವನ್ನು ನೋಡಿ ಅವರು ನಾನಾ ಸಂಧಾನಗಳನ್ನು ಹೈದರನಿಗೆ ತಿಳಿಯದಂತೆಯೇ ಇಂಗ್ಲಿಷರೊಂದಿಗೆ ನಡೆಸುತ್ತಿದ್ದರು. ಇದು ಲಕ್ಷ್ಮಮ್ಮಣ್ಣಿಯವರ ಕ್ಷಾತ್ರ ಮನೋಧರ್ಮವನ್ನು ಸೂಚಿಸುತ್ತದೆ. ಆ ಕಾಲದಲ್ಲಿ ಅಜೇಯನೆನಿಸಿಕೊಂಡು, ಬಲಿಷ್ಠರಾದ ಮರಾಟಿಯವರಿಗೂ ಸಗ್ಗದೆ ರಣಕುಶಲರಾದ ಇಂಗ್ಲಿಷರಿಗೂ ಬಗ್ಗದೆ, ಬೆಟ್ಟದಂತೆ ಅಚಲನಾಗಿದ್ದ ಹೈದರನ ಕೈಯಿಂದ ರಾಜ್ಯಾಧಿಕಾರಗಳನ್ನು ಕಿತ್ತುಕೊಂಡು ಮೈಸೂರು ಪ್ರಭು ಪ್ರಂಗವರಿಗೆ ಆಡಳಿತವನ್ನು ವಹಿಸಿಕೊಡಬೇಕೆಂಬ ಕಾರ್ಯದಲ್ಲಿ ನಿರತರಾದ ಲಕ್ಷ್ಮಮ್ಮಣ್ಣಿಯವರ ಕೀರ್ತಿ ಅಜರಾಮರವಾಯಿತು. ಆ ಮಹಾತಾಯಿಯ ಪುಣ್ಯನಾಮವನ್ನು ಯದುವಂಶ ಸಂತಾನ ಮರೆಯುವಂತಿಲ್ಲ; ಮೈಸೂರು ಪ್ರಜಾಸಮುದಾಯ ಸದಾ ರಾಜಭಕ್ತಿಯಿಂದ ನೆನೆಯುತ್ತಿದೆ.

# ಅಧ್ಯಾಯ ೧

## ಮನಶ್ಶಕ್ತಿ; ದೈವಾನುಗ್ರಹ

ಕ್ರಿ.ಶ. ೧೭೯೬ನೆಯ ಇಸವಿ. ನಳಸಂವತ್ಸರ ಚೈತ್ರ ಶುದ್ಧ ಪೂರ್ಣಿಮೆ
ಖಾಸಾ ಚಾಮರಾಜ ಒಡೆಯರು ಕಾಲವಾಗಿ ಐದು ದಿನಗಳಾಗಿದ್ದುವು
ಮಹಾರಾಣಿ ಲಕ್ಷ್ಮಮ್ಮಣ್ಣಿಯವರಿಗೆ ಕಡುದುಃಖ! ಅವರಿಗೆ ಆಗ ಸುಮಾರು
೫೫ ವರ್ಷ ವಯಸ್ಸು. ಮೈಸೂರು ರಾಜ್ಯ ಟೀಪುವಿನ ಕರಗತವಾಗಿತ್ತು. ರಾಜ
ಸಂತಾನ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರಿಗೆ ಇನ್ನೂ ಎರಡು ವರ್ಷ
ವಯಸ್ಸು! ಲಕ್ಷ್ಮಮ್ಮಣ್ಣಿಯವರು ಮುಂದುಗಾಣದೆ ಅಂದಿನ ರಾತ್ರಿ ತಮ
ಅಂತಃಪುರದಲ್ಲಿ ಮಗುವಿನ ತೊಟ್ಟಿಲ ಬಳಿಯಲ್ಲಿ ಕುಳಿತುಕೊಂಡು ಕಣ್ಣೀ
ರಿಡುತ್ತಿದ್ದರು! ಆ ಹಸುಳೆ ತಾಯಿಯ ನೋವನ್ನು ಅರಿಯಬಲ್ಲುದೆ! ದುಃಖ
ನೆಲೆಯನ್ನು ತಿಳಿಯಬಲ್ಲುದೇ! ಅವರು ಒಮ್ಮೆ ಮಗುವನ್ನು ನೋಡುವರು
ಮತ್ತೊಮ್ಮೆ ಅಂತಃಪುರದ ಕಿಟಕಿಯಲ್ಲಿ ಸುಳಿದಿದ್ದ ಬೆಳದಿಂಗಳನ್ನು ನೋಡು
ವರು. ಆ ಬೆಳುದಿಂಗಳು ಅಲ್ಲಿದ್ದ ಕತ್ತಲೆಯನ್ನೆಲ್ಲ ಪರಿಹರಿಸಿ, ಸಂತಪ್ತ
ಹೃದಯವನ್ನು ತಣಿಸುವಂತಿತ್ತು! ಎದುರುಗಡೆಯಲ್ಲಿ ಕರಿಯಘಟ್ಟ
ಬೆಳುದಿಂಗಳು ಕಡಲಿನಲ್ಲಿ ಬೆಳ್ಳಿಯ ಬೆಟ್ಟದಂತೆ ಕಾಣುತ್ತಿತ್ತು! ಆ ಮಹಾ
ಮಾತೆ ಮಗುವನ್ನು ತೂಗಿ ಮಲಗಿಸಿದಳು. ಅದರ ಗಲ್ಲವನ್ನು ಮುಟ್ಟಿ
ಮುತ್ತಿಟ್ಟಳು! ದಾದಿಯರು ಬೇರೆ ಬೇರೆ ತೊಟ್ಟಿಗಳಲ್ಲಿ ಮಲಗಿ ನಿದ್ರಿಸುತ್ತಿ
ದ್ದರು. ರಾತ್ರಿ ಮೊದಲನೆಯ ಜಾವು ಕಳೆದುಹೋಗಿತ್ತು. ಜಗತ್ತು ನಿದ್ರಾ
ಪರವಶವಾಗಿತ್ತು! ಆ ದುಃಖಭಾಗಿನಿಗೆ ನಿದ್ರೆ ಹತ್ತುವಂತಿಲ್ಲ! ಬೆಳುದಿಂಗಳ
ಲೋಕದ ಕತ್ತಲೆಯನ್ನು ಕಳೆದಿತ್ತು. ಆದರೇನು! ಲಕ್ಷ್ಮಮ್ಮಣ್ಣಿಯವ
ಮನಸ್ಸಿಗೆ ಆವರಿಸಿದ್ದ ದುಃಖದ ಕತ್ತಲೆಯನ್ನು ಅದು ಕಳೆಯಬಲ್ಲುದೇ! ಅವರ
ಅಂತಃಪುರದ ಬಿಸಿಲುಮಚ್ಚಿನ ಮೇಲೆ ನಿಂತುನೋಡಿದರು! ಸುತ್ತಲೂ ತರು
ರಾಜಿ ಕಾಣುತ್ತಿತ್ತು! ಬೆಳುದಿಂಗಳು ಆ ತರುರಾಜಿಯ ಮೇಲೆ ನಗುತ್ತಿತ್ತು
ದೂರದ ಗಿರಿಪಙ್ತಿಯಮೇಲೆ ನಲಿಯುತ್ತಿತ್ತು; ಕಾವೇರೀ ನದಿಯ ತೆರೆತೆ

ಗಳೊಂದಿಗೆ ಚೆಲ್ಲಾಟವಾಡುತ್ತಿತ್ತು. ಸುತ್ತಮುತ್ತಣ ಪ್ರಕೃತಿ ಸೌಂದರ್ಯ ಮನಮೋಹಕವಾಗಿ ಕಾಣುತ್ತಿತ್ತು! ಹೂಗಾಳಿ ಬೀಸುತ್ತಿತ್ತು! ಕಾವೇರಿ ಮಂಜುಳಗಾನದಿಂದ ಹರಿಯುತ್ತಿದ್ದಳು. ಶ್ರೀರಂಗನಾಥಸ್ವಾಮಿಯ ದೇವಾಲಯದ ಶಿಖರ ಬೆಳುದಿಂಗಳಲ್ಲಿ ಮಿನುಗುತ್ತಿತ್ತು. ವೈಕುಂಠದ ಪ್ರಶಾಂತ ದೈವಿಕ ವಾತಾವರಣವೇ ಆ ಎಡೆಯಲ್ಲಿ ತುಂಬಿತ್ತು. ಕಾವೇರಿಯ ಗದ್ದೆ ಬಯಲು ಭೂಮಿದೇವಿಯ ಆಡುಂಬೊಲದಂತಿತ್ತು! ಅಮೃತಕಿರಣನು ಸೂಸುತ್ತಿದ್ದ ಅಮೃತ ಜ್ಯೋತ್ಸ್ನೆಯು ಭೂಮಿದೇವಿಯ ಆನಂದಲಹರಿಯಂತೆ ಕಾಣುತ್ತಿತ್ತು! ಕಾವೇರಿಯು ತನ್ನ ಉಭಯ ಬಾಹುಗಳಿಂದಲೂ ರಾಜ್ಯಲಕ್ಷ್ಮಿಯನ್ನು ಆಲಿಂಗಿಸಿಕೊಂಡಿರುವಂತೆ ಉಭಯ ಕಾವೇರೀ ಮಧ್ಯದಲ್ಲಿ ರಾಜಧಾನಿಯು ಕಂಗೊಳಿಸುತ್ತಿತ್ತು. ಆ ರಂಗಧಾಮನ ಸನ್ನಿಧಿಯ ಸೌಂದರ್ಯ ವೈಭವವನ್ನು ನೋಡಿ ನಲಿಯಲು ನಿಂತಿರುವ ದೇವತೆಗಳ ಬಿಡುಗಣ್ಣುಗಳಂತೆ ನಕ್ಷತ್ರಗಳು ಆಕಾಶದಲ್ಲಿ ಹೊಳೆಯುತ್ತಿದ್ದುವು. ರಾಜಧಾನಿಯ ಸುತ್ತಲೂ ರಾಜ್ಯಲಕ್ಷ್ಮಿಯನ್ನೂ ರಂಗನಾಥನನ್ನೂ ಬಳಸಿ ನಿಂತಿರುವ ಆದಿಶೇಷನಂತೆ ಸುಭದ್ರವಾದ ಕೋಟೆಯ ಗೋಡೆ ಕಾಣುತ್ತಿದೆ. ಆ ಕೋಟೆಯ ಬತೇರಿಗಳು ಫಣಾಮಂಡಲದಂತೆ ತೋರುತ್ತಿದ್ದುವು. ಎಲ್ಲೆಲ್ಲೂ ನಿಶ್ಶಬ್ದ! ನೀರವ!

ಸಮರಾತ್ರಿ ಕಳೆದಿದೆ! ಚಂದ್ರಮ ನೆತ್ತಿಯ ಮೇಲಕ್ಕೆ ಬಂದಿದ್ದನು. ಅಂತಃಪುರದ ಮುಂದುಗಡೆಯಲ್ಲಿ ಎತ್ತರವಾಗಿ ಬೆಳೆದಿದ್ದ ದೇವದಾರು ಮರದ ನೆರಳು ಬಿಸಿಲುಮಚ್ಚಿನ ಮೇಲೆ ಬಿದ್ದಿತ್ತು! ಅದರ ನೆರಳು ಲಕ್ಷ್ಮಮ್ಮಣ್ಣಿಯವರ ಮನಸ್ಸನ್ನು ಮುಸುಕಿರುವ ದುಃಖಚ್ಛಾಯೆಯಂತೆ ಕಾಣುತ್ತಿತ್ತು. ಅವರು ಎಷ್ಟು ಹೊತ್ತಾಯಿತೋ ಏನೋ ನೆಲದಮೇಲೆ ತಮ್ಮ ತೋಳುತಲೆದಿಂಬಿನಲ್ಲಿ ತಲೆಯಿಟ್ಟು ಮಲಗಿದ್ದಾರೆ! ಭಾವ ಸಮಾಧಿಯಲ್ಲಿರುವ ಮಹರ್ಷಿಯಂತೆ ಅಂತರ್ಮುಖಿಯಾಗಿದ್ದರು. ಆಗಾಗ ಅವರು ರಂಗಧಾಮ! ಶ್ರೀ ರಂಗನಾಥ! ಎಂದು ಕನವರಿಸಿಕೊಳ್ಳುವಂತೆ ಪರಮಾತ್ಮನ ಹೆಸರನ್ನು ಉಚ್ಚರಿಸುತ್ತಿದ್ದರು. ಅವರ ಮನಃಪಟಲದಮೇಲೆ ತೆರೆತೆರೆಯಾಗಿ ಉರುಳುತ್ತಿರುವ ಭಾವನೆಗಳಿಗೆ ರೂಪುಗೊಟ್ಟು ತಮ್ಮಷ್ಟಕ್ಕೆ ತಾವೇ ಮಾತನಾಡುತ್ತಿದ್ದಾರೆ.

"ಅಮ್ಮಾ! ದಿವ್ಯ ತೇಜೋಮೂರ್ತಿನಿ! ಜಗನ್ಮಾತೆ! ಯದುವಂಶ ಸಂರಕ್ಷಿಣಿ! ಹಿಂದೆ ಇದ್ದ ಈ ವಂಶದ ವೈಭವವೇಕೆ ಇಂದು ಇಲ್ಲದಂತಾಯಿತು!

ನೀನು ಪರಾಶಕ್ತಿರೂಪಿಣಿಯಲ್ಲವೆ! ಈ ವಂಶದಲ್ಲಿ ಸಂಜನಿಸಿದ ಸತ್ಯಚಾರಿತ್ರರನ್ನೂ ನಿತ್ಯಪರಾಕ್ರಮಿಗಳನ್ನೂ ಕಂಡ ಪುರಾತನ ಮಾತೆಯೇ! ದೇವಮಾನವರ ಲೀಲೆಗಳನ್ನು ನೋಡಿ ತಣಿದ ಪುಣ್ಯವಂತೆಯೇ! ಚಾಮುಂಡೇಶ್ವರಿಯೇ! ದಕ್ಷಿಣಾಪಥದ ಅಭಿಮಾನ ದೇವತೆಯೆ! ನಿನ್ನ ಪಾದಾರವಿಂದಗಳಿಗೆ ವಂದಿಸುವೆನು. ಈ ಕನ್ನಡ ನಾಡು ಪರಮ ಪವಿತ್ರ ಭೂಮಿಯಲ್ಲವೆ! ಸುಪ್ರಸಿದ್ಧ ಕನ್ನಡ ರಾಜವಂಶಗಳು ಇಲ್ಲಿ ಆಳಿ ಕಣ್ಮರೆಯಾಗಲಿಲ್ಲವೇ! ಈಗಿರುವ ಕನ್ನಡ ರಾಜವಂಶವೆಂದರೆ ನಮ್ಮ ಯದುವಂಶ ಒಂದೇ ಅಲ್ಲವೆ! ಇದನ್ನು ಕಾಪಾಡಲು ನೀನು ವಿಂಧ್ಯಾಚಲದಿಂದ ಬಂದು ಮಹಾಬಲಾದ್ರಿಯಲ್ಲಿ ನೆಲಸಲಿಲ್ಲವೆ! ಈ ನಾಡಿನ ಪ್ರಾಚೀನತೆಯನ್ನೂ ಪವಿತ್ರತೆಯನ್ನೂ ನೆನೆದುಕೊಂಡರೆ ನನ್ನ ಮನಸ್ಸು ಶತಚ್ಛಿದ್ರವಾಗಿ ಹೋಗುತ್ತಿದೆಯಮ್ಮಾ! ಶ್ರೀಮನ್ನಾರಾಯಣನು ವಾಮನಾವತಾರ ಮಾಡಿ ಬಲಿಚಕ್ರವರ್ತಿಯಿಂದ ಮೂರು ಪಾದ ಭೂಮಿಯನ್ನು ದಾನವಾಗಿ ಪಡೆದು ಲೋಕಕಲ್ಯಾಣವನ್ನು ಸಾಧಿಸಿ ಕನ್ನಡ ನಾಡಿನಲ್ಲಿ ಸಂಚರಿಸಲಿಲ್ಲವೆ! ಇನ್ನೊಮ್ಮೆ ಆ ನಾರಾಯಣನು ವಾಮನಾವ ಮಾಡಿ ಧರ್ಮ ಶತ್ರುಗಳನ್ನು ಸಂಹರಿಸುತ್ತಾನೆಯೆ? ಮಹಾವೀರ ಪರಶುರಾಮನು ಮೆಚ್ಚಿದ ಗಂಡುಭೂಮಿಯಲ್ಲವೆ ಈ ಕರ್ಣಾಟಕ! ಅದ್ವಿತೀಯ ಪರಾಕ್ರಮಿ ರಾವಣನು ಪರಮೇಶ್ವರನನ್ನು ಮೆಚ್ಚಿಸಿ ಪಡೆದ ಆತ್ಮಲಿಂಗ ಗೋಕರ್ಣಕ್ಷೇತ್ರದಲ್ಲಿ ವಿರಾಜಿಸುತ್ತಿಲ್ಲವೆ! ಮುಂದೆ ಕೆಲವು ಕಾಲಾನಂತರ ಸೀತಾದೇವಿಯನ್ನು ರಾವಣನು ಕದ್ದೊಯ್ಯುವಾಗ ಅವನೊಂದಿಗೆ ಯುದ್ಧ ಮಾಡಿದ ಶೂರ ಜಟಾಯು ಕನ್ನಡಿಗನಲ್ಲವೆ! ಈಗ ನಮ್ಮ ರಾಜ್ಯಸೀತಾಲಕ್ಷ್ಮಿಯನ್ನು ಪರಕೀಯರ ಕೈಯಿಂದ ತಪ್ಪಿಸಲು ನಮ್ಮ ನಾಡಿನಲ್ಲಿ ವೀರರೇ ಹುಟ್ಟಲಿಲ್ಲವೆ! ಪತ್ನಿಯ ವಿಯೋಗದಿಂದ ಪರಿತಪಿಸುತ್ತಿದ್ದ ರಾಮಚಂದ್ರನನ್ನು ಸಂತೈಸಿ ಅವನಿಗೆ ನೆರವಾಗಿ ನಿಂತ ಪರಮಭಕ್ತ ಆತ್ಮಸಂಯಮಿ ಆಂಜನೇಯನು ವೀರ ಕನ್ನಡಿಗನಲ್ಲವೆ! ಇಂದು ಕನ್ನಡ ನಾಡಿನಲ್ಲಿ ಆತ್ಮಸಂಯಮಿಗಳಿಲ್ಲವೆ! ವೀರರಿಲ್ಲವೆ! ಕನ್ನಡಿಗರೇನು ಸಾಮಾನ್ಯರೆ?

"ಪಂಚಪಾಂಡವರು ಅಜ್ಞಾತವಾಸ ಮಾಡಲು ಆಶ್ರಯವಿತ್ತ ವಿರಾಟರಾಜನು ಕನ್ನಡಿಗನು. ಪಾರ್ಥನು ತೀರ್ಥಯಾತ್ರೆಗೆ ಬಂದು ಈ ನಾಡಿನಲ್ಲಿ ಸಂಚರಿಸಿದನು. ಜನಮೇಜಯ ಮಹಾರಾಜನು ಅಶ್ವಮೇಧ ಯಾಗವನ್ನು

ಮಾಡಿ ಹರಿಹರೇಶ್ವರನ ಸನ್ನಿಧಿಯಲ್ಲಿ ಬ್ರಾಹ್ಮಣರಿಗೆ ಗೋದಾನ ಭೂದಾನ ಗಳನ್ನು ಮಾಡಿದನು. ಕರ್ಣಾಟಕ ಮಾತೆ! ಎಂಥ ಸುಸಂಸ್ಕೃತಿಯ ನಾಡಿದು! ಸನಾತನ ಧರ್ಮದ ಪವಿತ್ರ ಭೂಮಿಯಲ್ಲವೇ? ಇಂದು ಆ ಧರ್ಮ ಕಳೆಗುಂದು ತ್ತಿದೆಯಲ್ಲವೇ? ಸನಾತನ ಧರ್ಮದೇವತೆ ವಿಧರ್ಮಿಯರ ಕೈಸೆರೆಯಾಗಿ ಕಣ್ಣೀರು ಸುರಿಸುತ್ತಿಲ್ಲವೆ! ಎಲ್ಲಿ ನೋಡಿದರೂ ಪುಣ್ಯತೀರ್ಥಗಳು! ಪುಣ್ಯ ಕ್ಷೇತ್ರಗಳು. ಜಮದಗ್ನಿ, ಅಗಸ್ತ್ಯ, ಗೌತಮ, ಕಣ್ವ, ಮಾಂಡವ್ಯ, ಋಷ್ಯ ಶೃಂಗ ಮುಂತಾದ ಮಹರ್ಷಿಗಳ ಪಾದಧೂಳಿಯಿಂದ ಈ ನಾಡು ಪವಿತ್ರ



ಚಾಮುಂಡೇಶ್ವರಿ ದೇವಾಲಯ

ವಾಗಿದೆ. ಅವರೆಲ್ಲರ ತಪಃಪ್ರಭಾವ ಈ ನಾಡಿನ ಅಂತಶ್ಶಕ್ತಿಯಾಗಿದೆ. ಗೋದಾ ವರೀ, ಕೃಷ್ಣಾ, ಭೀಮರಥಿ, ಮಲಪ್ರಭೆ, ಕಾವೇರಿ, ತುಂಗಭದ್ರೆ, ವೇದಾವತಿ,

ಕಪಿಲಾ, ಉತ್ತರ ಪಿನಾಕಿನಿ, ದಕ್ಷಿಣಪಿನಾಕಿನಿ, ಕ್ಷೀರನದಿ, ಲಕ್ಷ್ಮಣತೀರ್ಥ, ಲೋಕಪಾವನೆ ಮುಂತಾದ ಪುಣ್ಯನದಿಗಳು ಈ ನಾಡಿನಲ್ಲಿ ಹರಿಯುತ್ತಿವೆ. ಈ ಪುಣ್ಯನದಿಗಳ ಪುಣ್ಯಪ್ರಭಾವದಿಂದ ಲೋಕಕ್ಷೇಮ ಸಾಧನೆಯಾಗಲಿ!

"ಕರ್ಣಾಟಕ ಜನನೀ! ಶ್ರೀ ಚಾಮುಂಡೇಶ್ವರಿಯೆ! ನೀನು ಸನಾತನ ಧರ್ಮಾಶ್ರಯಳಲ್ಲವೆ! ನಿನ್ನ ವಿಶ್ವ ವಿಶಾಲ ಹೃದಯದಲ್ಲಿ ಧರ್ಮಜ್ಯೋತಿ ಎಂದೂ ನಂದಿಹೋಗದ ನಂದಾದೀಪದಂತೆ ಬೆಳಗುತ್ತಿಲ್ಲವೆ! ನೀನು ಪರಂಜ್ಯೋತಿಯಲ್ಲವೆ! "ಅಹಿಂಸಾ ಪರಮೋಧರ್ಮಃ" ಎಂದು ಸಾರಿದ ಜೈನ ಸಿದ್ಧಾಂತ ಈ ನಾಡಿನಲ್ಲಿದೆ! ವೇದಧರ್ಮವನ್ನು ಉದ್ಧರಿಸಲು ಅವತರಿಸಿದ ಶ್ರೀ ಶಂಕರಾಚಾರ್ಯರೂ ಶ್ರೀ ರಾಮಾನುಜಾಚಾರ್ಯರೂ ಮದ್ವಾಚಾರ್ಯರೂ ನಿನ್ನ ಕೀರ್ತಿಕಿರಣಗಳಂತಿದ್ದಾರೆ. ಅವರು ಈ ನಾಡಿನಲ್ಲಿ ಸಂಚರಿಸಿ ತಮ್ಮ ತಮ್ಮ ಧರ್ಮವನ್ನು ಜಗತ್ತಿಗೆ ಸಾರಿದರು. ವೀರಶೈವವನ್ನು ಸಂಸ್ಥಾಪಿಸಿದ ಶ್ರೀ ರೇಣುಕಾಚಾರ್ಯರು ಈ ನಾಡಿನಲ್ಲಿ ತಮ್ಮ ಶ್ರೀ ಮಠವನ್ನು ಸ್ಥಾಪಿಸಿದರು. ನಿನ್ನ ಧರ್ಮಪ್ರಭಾವವೇನು ಸಾಮಾನ್ಯವೆ?

"ಕ್ಷಾತ್ರತೇಜೋಮೂರ್ತಿನಿ! ನಿನ್ನ ಪುಣ್ಯಗರ್ಭದಲ್ಲಿ ದುರ್ವಿನೀತ ರಣವಿಕ್ರಮ ಪುಲಕೇಸಿ, ಸನಾತನ ಧರ್ಮಾಶ್ರಯ ಕೀರ್ತಿವರ್ಮ, ಆದಿತ್ಯವರ್ಮ, ಸತ್ಯಾಶ್ರಯ ರಣರಸಿಕ ವಿಕ್ರಮಾದಿತ್ಯ, ಜಯಸಿಂಹವರ್ಮ, ಯುದ್ಧಮಲ್ಲ, ವಿನಯಾದಿತ್ಯ ಮುಂತಾದ ಪರಾಕ್ರಮಿಗಳು ಜನಿಸಿ ನಿನ್ನ ಕೀರ್ತಿಯನ್ನು ಹಬ್ಬಿಸಿದರು. ಇಂಥ ವೀರಪುತ್ರರನ್ನು ಪಡೆದ ನೀನು ಇಂದೇಕೆ ನಿಸ್ಸಹಾಯಕಳಾಗಿರುವೆಯಮ್ಮಾ! ನಿನ್ನ ಮಕ್ಕಳು ಶತ್ರುಭೀತಿಯನ್ನು ಕಂಡರಿಯರು! ಅಪಕೀರ್ತಿಯನ್ನು ಸಹಿಸರು! ಯುದ್ಧಭೂಮಿಯಲ್ಲಿ ಸಿಂಹಸದೃಶರಾಗಿ ನಿಲ್ಲುತ್ತಿದ್ದರು. ದೇಶಸ್ವಾತಂತ್ರ್ಯವನ್ನು ಕಾಪಾಡುವುದಕ್ಕಾಗಿ ಪ್ರಾಣದಾಸೆಯನ್ನೂ ಬಿಟ್ಟು ಬಲಿದಾನಮಾಡಲು ಸಿದ್ಧರಾಗುತ್ತಿದ್ದರು. ವಿಜಯನಗರ ಸಾಮ್ರಾಜ್ಯವನ್ನು ಸಂಸ್ಥಾಪಿಸಿದ ಹರಿಹರ ಬುಕ್ಕರಾಯರ ಪರಾಕ್ರಮವೇನು ಸಾಮಾನ್ಯವಾದುದೇ! ವಿಜಯನಗರ ಪರಂಪರೆಯಲ್ಲಿ ಬಂದ ಪ್ರೌಢ ದೇವರಾಯ, ಕೃಷ್ಣದೇವರಾಯ, ಅಚ್ಯುತರಾಯ, ರಾಮರಾಯ ಮುಂತಾದ ಮಹಾವೀರರು ಕರ್ಣಾಟಕ ರಾಜ್ಯಲಕ್ಷ್ಮಿಯನ್ನು ನಲಿಸಿದರು. ರತ್ನಸಿಂಹಾಸನಾಧೀಶ್ವರರಾಗಿ ಸ್ವರಾಜ್ಯದ ಅಭ್ಯುದಯವನ್ನು ಸಾಧಿಸಿದರು. ಶತ್ರುಗಳನ್ನು

ಸಂಹಾರಮಾಡಿದರು. ನಿಜಪರಾಕ್ರಮಭೂಷಿತರಾದ ಆ ವೀರರು ಕಲಾಪರಿ ಪೋಷಕರಾಗಿದ್ದರು; ವಿದ್ವಜ್ಜನಾಶ್ರಯದಾತರಾಗಿದ್ದರು. ಸಂಸ್ಕೃತಿಸಂಪನ್ನ ರಾಗಿದ್ದರು. ಆ ಭಾಗ್ಯವೇಕೆ ಕಳೆಗುಂದಿತು? ಆ ಪೌರುಷವೇಕೆ ಕಣ್ಮರೆ ಯಾಯಿತು! ಕನ್ನಡ ನಾಡಿನ ದುರವಸ್ಥೆಯನ್ನು ನೆನಸಿಕೊಂಡರೆ ದುಃಖಾಶ್ರು ಗಳು ಚಿಮ್ಮುತ್ತವೆ. ಕನ್ನಡಿಗರು ಆತ್ಮಬಲವನ್ನು ನೀಗಿಕೊಂಡು ಸ್ವಾತಂತ್ರ್ಯ ವನ್ನು ಕಳೆದುಕೊಂಡು ಪರಿತಪಿಸುತ್ತಿರುವರು. ಹಿಂದೊಮ್ಮೆ ಇಂಥ ವಿಪನ್ನಾ ವಸ್ಥೆಯೇ ಸಂಭವಿಸಿದ್ದಾಗ ವಿದ್ಯಾರಣ್ಯರು ಕರ್ಮವೀರರಂತೆ ದುಡಿದರು. ರಾಷ್ಟ್ರಪುರುಷರಾಗಿ ರಾಜ್ಯವನ್ನು ಕಟ್ಟಿದರು. ಕಾಲಚಕ್ರದ ತಿರುವಿನಲ್ಲಿ ಶತಮಾನಗಳು ಕಳೆದುಹೋದುವು. ಕರ್ಣಾಟಕ ರಾಜ್ಯಲಕ್ಷ್ಮಿ ಮತ್ತೊಮ್ಮೆ ತನ್ನ ವೈಭವವನ್ನು ನೀಗಿಕೊಂಡು ಪರದಾಸ್ಯದಲ್ಲಿ ಬಳಲುವಂತಾಯಿತು. ಕರ್ಣಾಟಕಾಭಿಮಾನದೇವತೆಯಾದ ನೀನು ಅಂದು ಭುವನೇಶ್ವರಿಯಾಗಿ ತುಂಗಭದ್ರಾ ನದಿಯ ತೀರದಲ್ಲಿ ಶ್ರೀ ಪಂಪಾ ವಿರೂಪಾಕ್ಷ ಸನ್ನಿಧಿಯಲ್ಲಿ ಶ್ರೀ ವಿದ್ಯಾರಣ್ಯ ಯತಿಯ ಮೂಲಕ ಹುಕ್ಕಬುಕ್ಕರಿಂದ ರಾಜ್ಯ ಸಂಸ್ಥಾಪನೆ ಮಾಡಿಸಲಿಲ್ಲವೆ! ಆಮೇಲೆ ನೀನು ನಂಜನಗೂಡು ಶ್ರೀಕಂಠೇಶ್ವರನ ಸನ್ನಿಧಿಯಲ್ಲಿ ಕಪಿಲಾನದಿಯ ತೀರದಲ್ಲಿ ಜಂಗಮಮೂರ್ತಿಯ ಮೂಲಕ ಯದುರಾಯ ಕೃಷ್ಣರಾಯರಿಂದ ಕನ್ನಡ ರಾಜವಂಶವನ್ನು ಸಂಸ್ಥಾಪಿಸಿದೆ ಯಲ್ಲವೆ? ಯದುರಾಯರು ಪರಾಕ್ರಮದಿಂದ ಹೋರಾಡಿ ಆಗ ಸಂಸ್ಥಾನದ ಅರಿಷ್ಟವನ್ನು ಪಾರುಮಾಡಿ, ಮೈಸೂರು ರಾಜಪುತ್ರಿಯನ್ನು ಮದುವೆಯಾಗಿ ಯದುವಂಶ ಮೂಲಪುರುಷರಾದರು! ಅವರ ತರುವಾಯ ಹಿರಿಯ ಬೆಟ್ಟದ ಚಾಮರಾಜ ಒಡೆಯರು, ತಿಮ್ಮರಾಜ ಒಡೆಯರು, ಹಿರಿಯ ಚಾಮರಾಜರಸ ಒಡೆಯರು, ಹಿರಿಯ ಬೆಟ್ಟದ ಚಾಮರಾಜ ಒಡೆಯರು. ತಿಮ್ಮರಾಜ ಒಡೆಯರು, ಬೋಳ ಚಾಮರಾಜ ಒಡೆಯರು. ಬೆಟ್ಟದ ಚಾಮರಾಜ ಒಡೆಯರು, ರಾಜ ಒಡೆಯರು, ಚಾಮರಾಜ ಒಡೆಯರು, ಇಮ್ಮಡಿ ರಾಜ ಒಡೆಯರು, ರಣಧೀರ ಕಂಠೀರವ ನರಸರಾಜ ಒಡೆಯರು, ದೊಡ್ಡದೇವರಾಜ ಒಡೆಯರು, ಚಿಕ್ಕ ದೇವರಾಜ ಒಡೆಯರು, ಕಂಠೀರವ ಒಡೆಯರು, ದೊಡ್ಡ ಕೃಷ್ಣರಾಜ ಒಡೆಯರು, ಚಾಮರಾಜ ಒಡೆಯರು. ಇಮ್ಮಡಿ ಕೃಷ್ಣರಾಜ ಒಡೆಯರು, ನಂಜರಾಜ ಒಡೆಯರು, ಬೆಟ್ಟದ ಚಾಮರಾಜ ಒಡೆಯರು, ಖಾಸಾ ಚಾಮ

ರಾಜ ಒಡೆಯರು-ರತ್ನಸಿಂಹಾಸನದಮೇಲೆ ಮಂಡಿಸಿದರು. ಆದರೇನು!
ನನ್ನ ಪತಿ ಇಮ್ಮಡಿ ಕೃಷ್ಣರಾಜ ಒಡಯರ ಕಾಲದಿಂದಲೂ ರಾಜ್ಯದಲ್ಲಿ ಹಿತ
ಶತ್ರುಗಳು ಪ್ರಬಲಸಿ, ರಾಜಸಿಂಹಾಸನದ ಪ್ರಭೆಯನ್ನು ಆಚ್ಛಾದಿಸಿರುವರಲ್ಲಾ!
ಜಗಜ್ಜನನಿ! ನಮ್ಮ ಧರ್ಮ, ಘನತೆ, ಗೌರವಗಳಿಗೆ ಕುಂದು ಬಂದಿತು.
ಅಭಿಮಾನಶೂನ್ಯರಾದ ಜನರೇ ನಾಡಿನಲ್ಲಿ ತುಂಬಿರುವರು. ತನ್ನ ಜನ,
ತನ್ನ ನಾಡು, ತನ್ನ ಧರ್ಮಗಳಿಗಾಗಿ ಆತ್ಮಾರ್ಪಣೆ ಮಾಡುವ ಮನೋಭಾವವೇ
ಅಳಿದುಹೋಗಿದೆ. ದೇಶಪ್ರೇಮವಿಲ್ಲ. ವಿಧರ್ಮಿಯರ ಹಾವಳಿಯಿಂದ
ಕರ್ಣಾಟಕಾಂಬೆ ಗಡಗಡನೆ ನಡುಗುತ್ತಿರುವಳು. ತಾಯಿ! ಮತ್ತೊಮ್ಮೆ
ನೀನು ಹರ್ಷವದನೆಯಾಗಿ ನಗುವುದೆಂದು! ಭಾರತಾಂಬೆಯ ಮಣಿಮಕುಟ
ರತ್ನವಾಗುವುದೆಂದು! ಸನಾತನ ಧರ್ಮ ಸಂಜೀವಿನಿಯಾಗುವುದೆಂದು! ನಿನ್ನ
ವೈಭವದ ಮಂಗಳ ದಿನಗಳು ಮೂಡುವುದೆಂದು! ನೀನು ಮತ್ತೆ ಕ್ಷಾತ್ರತೇಜೋ
ವಿರಾಜಮಾನಳಾಗುವುದೆಂದು! ಅಮ್ಮಾ! ನೀನು ಖಿನ್ನವದನಳಾಗಿ ಕಾಣುವೆ
ಯಲ್ಲಾ! ನಿನ್ನ ದುಃಖವನ್ನು ದೂರಮಾಡಲು ನನ್ನಿಂದ ಸಾಧ್ಯವೇ!
ನಾನಾದರೋ ಹೆಣ್ಣು ಹೆಂಗಸು! ಅನಾಥಳಾಗಿದ್ದೇನೆ. ಹೊಟ್ಟೆಯಲ್ಲಿ ಹುಟ್ಟಿದ
ಮಕ್ಕಳಿಲ್ಲ! ರತ್ನಸಿಂಹಾಸನದ ಮೇಲೆ ಮಂಡಿಸುವ ರಾಜ ಸಂತಾನವಿಲ್ಲ!
ಮುಮ್ಮಡಿ ಶ್ರೀಕೃಷ್ಣರಾಜರು ಪ್ರಭುವಾಗಬೇಕು! ಇನ್ನೂ ಅವರು ಹಾಲು
ಹಸುಳೆ! ಟೀಪೂ ಸುಲ್ತಾನನು ನಮ್ಮ ರಾಜವಂಶವನ್ನು ಮೂಲೆಗೊತ್ತಿ
ನಮ್ಮನ್ನು ಲಕ್ಷ್ಯಮಾಡುತ್ತಿಲ್ಲ! ಈ ಆಪತ್ತಿನಿಂದ ನಮ್ಮನ್ನು ಉದ್ಧಾರ
ಮಾಡುವವರಾರು! ನೀನೇ ದಾರಿ ತೋರಿಸಬೇಕು! ನನ್ನ ಪ್ರಯತ್ನಗಳೆಲ್ಲ
ವಿಫಲವಾದುವು! ನಿನಗೆ ದಯೆ ಬರಲಿಲ್ಲ! ನಾನೂ ಯಾರನ್ನು ಮರೆಹೋಗಲಿ!
ನನಗಾದರೋ ವಯಸ್ಸಾಯಿತು! ಮೈಸೂರು ರಾಜವಂಶ ಮತ್ತೊಮ್ಮೆ
ರಾಜಸಿಂಹಾಸನದಲ್ಲಿ ಮಂಡಿಸಿ ಓಲೈಸಿಕೊಳ್ಳುವುದನ್ನು ನಾನು ನೋಡುವ
ಭಾಗ್ಯವಿದೆಯೇ? ನಾಲ್ವತ್ತು ವರ್ಷಗಳನ್ನು ದುಃಖದಿಂದ ನೂಕಿದೆನು!
ನಾನು ವೀರ ಕ್ಷತ್ರಿಯ ವಂಶದಲ್ಲಿ ಹುಟ್ಟಿದೆನು! ರಾಜವಂಶವನ್ನು ಸೇರಿದೆನು!
ಈ ದೌರ್ಭಾಗ್ಯವನ್ನು ನೋಡುವುದಕ್ಕಾಗಿಯೇ ನಾನು ಬದುಕಿರಬೇಕಾಯಿತೆ
ನನಗೆ ದಿಕ್ಕು ತೋರದು" ಎಂದು ಲಕ್ಷ್ಮಮ್ಮಣ್ಣಿಯವರು ದುಃಖದಿಂದ
ಚಿಂತಾಪರವಶರಾಗಿ ಮಾತಾನಾಡಿಕೊಳ್ಳುತ್ತಿದ್ದರು. ಎದುರಿಗೆ ಶ್ರೀ ಚಾಮು

ಡೇಶ್ವರಿಯೇ ನಿಂತುಕೊಂಡು ಅವನೊಂದಿಗೆ ಮಾತನಾಡುತ್ತಿರುವಂತೆ ಭಾಸವಾಯಿತು!

"ವೀರ ಕ್ಷತ್ರಿಯ ಕುಮಾರೀ, ನೀನು ದುಃಖಭಾಜನಳಾಗಬೇಡ! ಧೈರ್ಯದಿಂದ ಕಾರ್ಯತತ್ಪರಳಾಗು. ನಿನ್ನ ಪ್ರಯತ್ನ ಒಂದು ಸಲ ವಿಫಲವಾಯಿತೆಂದು ನಿರುತ್ಸಾಹಳಾಗಬೇಡ. "ಸತ್ಯಮೇವೋದ್ಧರಾಮ್ಯಹಂ" ಎಂಬ ಧ್ಯೇಯಸಾದನೆಗಾಗಿ ದುಡಿಯುತ್ತಿರು. ನಿರಾಶಳಾಗಬೇಡ! ರತ್ನಸಿಂಹಾಸನದ ಮೇಲೆ ನಿನ್ನ ವಂಶ ಸಂತಾನ ಕುಳಿತು ರಾಜ್ಯಭಾರ ಮಾಡುವಕಾಲ ಸನ್ನಿಹಿತವಾಗುತ್ತಿದೆ. ನಿನ್ನ ಕಷ್ಟಗಳೆಲ್ಲ ಪರಿಹಾರವಾಗುತ್ತವೆ. ನಿಜವಾದ ಕರ್ಮಯಾಗದಲ್ಲಿ ನೀನು ಆತ್ಮಾರ್ಪಣೆ ಮಾಡಲು ಸಿದ್ಧಳಾಗು! ನೀನು ಅಬಲೆಯೆಂದು ಅಧೀರಳಾಗಬೇಡ! ನಿನ್ನ ಕ್ರಿಯಾಸಿದ್ಧಿಯ ಬಲದಿಂದ ನೀನು ಅಜೇಯಳಾಗುತ್ತೀಯೆ! ಸ್ವಾತಂತ್ರ್ಯದ ಮುಂಬೆಳಗು ಮೂಡುತ್ತಿದೆ. ರಾಷ್ಟ್ರಸೇವೆಯಲ್ಲಿ ಪರಾಙ್ಮುಖಳಾಗಬೇಡ! ನಿನಗೆ ಶುಭವಾಗಲಿ" ಎಂದು ಅವ್ಯಕ್ತ ಮೂರ್ತಿಯೊಂದು ನುಡಿದು ಕಣ್ಮರೆಯಾದಂತೆಯೂ ಭಾಸವಾಯಿತು! ಲಕ್ಷ್ಮಮ್ಮಣ್ಣಿಯವರು ಕಣ್ಣುಬಿಟ್ಟು ನೋಡಿದರು. ಬೆಳಗಿನ ಜಾಮು. ಬೆಳುದಿಂಗಳು ಮಸುಕು ಮಸುಕಾಗಿತ್ತು! ಚಂದ್ರನು ಮರಗಳ ಮರೆಯಲ್ಲಿ ಕಾಣುತ್ತಿದ್ದನು. ಮೂಡಲು ಕೆಂಪು ಹರಿಯುತ್ತಿತ್ತು. ಆಕಾಶದಲ್ಲಿ ಅಲ್ಲೊಂದು ಇಲ್ಲೊಂದು ನಕ್ಷತ್ರ ಕಾಣುತ್ತಿತ್ತು. ಶ್ರೀ ರಂಗನಾಥಸ್ವಾಮಿಯ ದೇವಾಲಯದಲ್ಲಿ ಪ್ರಾತಃಕಾಲ ಪೂಜೆಯು ನಡೆಯುತ್ತಿತ್ತು. ಜಾಗಟೆ, ಘಂಟೆ, ಶಂಖ, ಭೇರಿ, ತಾಳ, ಮೇಳಗಳು ಮೊಳಗುತ್ತಿದ್ದುವು. ಬ್ರಾಹ್ಮಣರು ವೇದಮಂತ್ರಗಳನ್ನು ಉಚ್ಚರಿಸುತ್ತಿದ್ದರು. ಹೆಂಗಸರೂ ಗಂಡಸರೂ ಮಕ್ಕಳೂ ತಂಡತಂಡವಾಗಿ ದೇವಸ್ಥಾನಕ್ಕೆ ಹೋಗಿಬರುತ್ತಿದ್ದರು. ಕಾವೇರೀ ನದಿಯು ಏರುತಗ್ಗುಗಳಲ್ಲಿ ನೊರೆನೊರೆಯಾಗಿ ಬಿದ್ದೇಳುತ್ತ ಎಳೆಗಾಳಿ ಸುಳಿಯುತ್ತಿರಲು ಎಳೆಬಿಸಿಲು ನಗುತ್ತಿರಲು ಅಲ್ಲಲ್ಲಿ ಸುಳಿಸುಳಿಯಾಗಿ ಸುತ್ತುತ್ತ ಕಲಕಲರವದಿಂದ ಹರಿದುಹೋಗುತ್ತಿತ್ತು! ಮುಂಭಾಗದಲ್ಲಿ ಕರಿಘಟ್ಟ ಅಚಲವಾಗಿ ನಿಂತಿದೆ! ಆ ಗಿರಿಯಂತೆ ಅಚಲಚಿತ್ತಳಾಗು! ಆ ನದಿಯಂತೆ ಕರ್ತವ್ಯಮುಖಳಾಗು! ಎಂದು ಪ್ರಕೃತಿ ದೇವಿಯು

ಆ ಕರ್ಮಯೋಗಿಣಿಗೆ ಜೀವನರಹಸ್ಯವನ್ನು ಉಪದೇಶಿಸುತ್ತಿದ್ದಂತೆಯೇ
ಭಾಸವಾಗುತ್ತಿತ್ತು.

ಲಕ್ಷ್ಮಮ್ಮಣ್ಣಿಯವರು ನಿತ್ಯಕರ್ಮಾನುಷ್ಠಾನಗಳನ್ನು ತೀರಿಸಿಕೊಂಡ
ಶ್ರೀ ರಂಗನಾಥನ ದರ್ಶನಮಾಡಿಕೊಂಡು ಬಂದರು. ಹಿಂದಿನ ರಾತ್ರಿ ತಮ
ಮನಸ್ಸಿಗೆ ಗೋಚರವಾದ ದಿವ್ಯ ಸಂದರ್ಶನವನ್ನು ಆಗಾಗ ಮನಸ್ಸಿನಲ್ಲಿ ಚಿತ್ರಿಸಿ
ಕೊಳ್ಳುತ್ತಿದ್ದರು. ಕರ್ಣಾಟಕ ಮಾತೆ ಶ್ರೀ ಚಾಮುಂಡೇಶ್ವರಿಯು ಅನುಗ್ರಹಿ
ಸಿದಳೆಂದು ತಿಳಿದರು. ತಮ್ಮ ಅಂತರ್ವಾಣಿಯ ಆದೇಶವನ್ನು ಆಜೀವ
ಪರ್ಯಂತ ಪರಿಪಾಲಿಸುವುದಾಗಿ ಸಂಕಲ್ಪ ಮಾಡಿದರು!

"ತಾಯಿಾ! ಚಾಮುಂಡೇಶ್ವರೀ! ನಾನು ನಾಲ್ವತ್ತು ವರ್ಷದಿಂದ
ಮಾಡಿದ ನನ್ನ ಅಖಂಡ ತಪಸ್ಸಿನ ಫಲವನ್ನು ನಾಡಿನ ಉದ್ಧಾರಕ್ಕಾಗಿಯೆ
ಧಾರೆಯೆರೆದೆನು. ಈ ಪ್ರಪಂಚದಲ್ಲಿ ನನ್ನದೆಂಬುದು ಯಾವುದೂ ಇಲ್ಲ
ತಾಯ್ನಾಡಿನ ಸೇವಾಭಾಗ್ಯವೊಂದೇ ನನ್ನದು! ಈ ಸೇವಾಕಾರ್ಯದಲ್ಲಿ ನಾನ
ಸರ್ವಸ್ವವನ್ನೂ ತ್ಯಾಗಮಾಡಲು ಸಿದ್ಧಳಾಗಿರುವೆನು. ನಾಡಿನ ಸ್ವಾತಂತ್ರ್ಯವೆ
ನನಗೆ ಮುಕ್ತಿ! ಸನಾತನ ಧರ್ಮದ ಅಭ್ಯುದಯವೇ ನನ್ನ ಪರಮಾರ್ಥ! ನನ
ಜೀವಿತದಲ್ಲಿ ಇದಕ್ಕಿಂತಲೂ ಮಿಗಿಲಾಡುದು ಇನ್ನೊಂದಿಲ್ಲ. ಪರಧರ್ಮೀಯ
ಪದಘಾತದಿಂದ ಜರ್ಝರಿತವಾಗುತ್ತಿರುವ ನಾಡನ್ನು ಒಂದುಗೂಡಿಸಿ ಜನಬಲ
ವನ್ನು ಕೇಂದ್ರೀಕರಿಸಿ ಶ್ರೇಯಸ್ಸಾಧನೆಗಾಗಿಯೇ ದುಡಿಯುವೆನು. ಈ ಮಹ
ಕಾರ್ಯದಲ್ಲಿ ಸತ್ತರೂ ಚಿಂತೆಯಿಲ್ಲ! ಸತ್ತವರೇನು ಹುಟ್ಟುವುದಿಲ್ಲವೆ
ಸಾಯುವುದಾದರೂ ದೇಶಹಿತಕ್ಕಾಗಿ ಸಾಯಬೇಕು. ಅಂಥ ಮರಣವೇ ಮಹ
ನವಮಿ. ನಾನು ಬಲ್ಲ ರಾಜನೀತಿ ಶಾಸ್ತ್ರ ಬಲದಿಂದ ದೇಶೋನ್ನತಿಯನ
ಸಾಧಿಸುವೆನು. ಬುದ್ಧಿಶಕ್ತಿಯಿದೆ, ದೇಹಬಲವಿದೆ. ಜನಸಹಾಯವಿಲ್ಲ
ಅದನ್ನು ಗಳಿಸಿಕೊಳ್ಳಬೇಕು. ಈ ತ್ರಿವೇಣಿ ಸಂಗಮದಲ್ಲಿ ಕನ್ನಡನಾಡಿ
ಪುಣ್ಯಸ್ನಾನವಾಗಬೇಕು! ನಾನು ಹಗಲಿರುಳೂ ನಾಡಿನ ಅಭ್ಯುದಯಕ್ಕಾಗಿಯೆ
ಚಿಂತಿಸುವೆನು! ಜಗನ್ಮಾತೆ! ಈ ಸಂಕಲ್ಪವನ್ನು ಈಡೇರಿಸಲು ನನಗೆ ಸರಿಯಾ
ಮಾರ್ಗ ತೋರಿಸು. ಯಾವ ಯಾವ ರೂಪದಿಂದಲಾದರೂ ನೀನು ಮೈದೋ
ಕರುಣಿಸು. ನನ್ನ ಪ್ರಯತ್ನ ಎಷ್ಟೇ ಬಲಯುತವಾದುದಾದರೂ ದೈವಬಲವಿ
ಬೇಕು. ಈಗ ನಾಡಿಗೆ ಒದಗಿರುವ ದುರವಸ್ಥೆಯನ್ನು ಕೊನೆಗಾಣಿಸಿ ಧಮ

ಸಂಸ್ಕೃತಿಗಳನ್ನು ಉಳಿಸಬೇಕಾದರೆ ಸುಭದ್ರವಾದ ಸ್ವರಾಜ್ಯವನ್ನು ಸ್ಥಾಪಿಸದೆ ವಿಧಿಯಿಲ್ಲ. ಈ ಸಾಹಸಕಾರ್ಯಕ್ಕೆ ನಾನು ನಾಡನ್ನು ಸಿದ್ಧಗೊಳಿಸಬೇಕು. ತಾಯಿಾ! ನನ್ನನ್ನು ಅನುಗ್ರಹಿಸು. ಈ ಶ್ರೀ ರಂಗನಾಥಸ್ವಾಮಿಯ ಹೆಸರಿನಲ್ಲಿ ನಾನು ರಾಜ್ಯಸ್ಥಾಪನೆ ಮಾಡುವೆನು! ಕಾವೇರಿಯೇ ನನ್ನನ್ನು ಕರುಣಿಸು! ಮಹಾ ಬಲಾದ್ರಿಯೇ ನನ್ನಲ್ಲಿ ಸ್ಥೈರ್ಯವನ್ನು ತುಂಬು! ಸಕಲ ದೇವತೆಗಳೇ ನನಗೆ ನೆರವಾಗಿ ನಿಲ್ಲಿರಿ! ಕರ್ಮಸಾಕ್ಷಿಯೇ ನೀನು ಮಾರ್ಗದರ್ಶಕನಾಗಿರು! ಭೂದೇವಿಯೇ ನೀನು ಪ್ರಸನ್ನಚಿತ್ತಳಾಗು! ಶ್ರೀ ದೇವಿ! ಮಹಿಷಾಸುರ ಮರ್ದಿನಿ! ಸುಪ್ರೀತಳಾಗು" ಎಂದು ಅವರು ಕಾರ್ಯಸಾಧನೆಯನ್ನು ಮಾಡಲು ನಿರ್ಧರಿಸಿದರು. ಅದರಂತೆಯೇ ಅವರು ಹೈದರ್ ಆಲಿಯ ಮತ್ತು ಅವನ ತರುವಾಯ ಟೀಪುವಿನ ಮುಷ್ಟಿಯಿಂದ ರಾಜ್ಯವನ್ನು ಹಿಂದಕ್ಕೆ ತೆಗೆದುಕೊಳ್ಳಲು ಸಂಧಾನ ಮಾಡಿದರು. ಅವರು ಮಾಡಿದ ಸಂಧಾನ ಪ್ರಯತ್ನಗಳನ್ನು ಪ್ರಾಸಂಗಿಕವಾಗಿ ಹಿಂದಿನ ಅಧ್ಯಾಯಗಳಲ್ಲಿ ಹೇಳಿದೆ. ಅವರ ಸಂತಾನ ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರಿಗೆ ಇಂಗ್ಲೀಷರು ಟೀಪುವಿನ ಮರಣಾನಂತರ ಮೈಸೂರು ರಾಜ್ಯವನ್ನು ಕೊಡಬೇಕಾದರೆ ಲಕ್ಷ್ಮಮ್ಮಣ್ಣಿಯವರ ಸಾಹಸದ ಚರಿತ್ರೆಯೇ ಕಾರಣ!

# ಅಧ್ಯಾಯ ೧೩

## ಕಾಲಾಗ್ನಿ ; ಜ್ವಾಲಾಮುಖಿ

ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಮೈಸೂರು ರಾಜಮನೆತನಕ್ಕೆ ಬಂದಾಗಿನಿಂದಲೂ ದೇಶದ ಆಗುಹೋಗುಗಳನ್ನು ಚೆನ್ನಾಗಿ ತಿಳಿದಿದ್ದರು. ದಳವಾಯಿಗಳ ಚಾಕಚಕ್ಯತೆ ಹೈದರ್ ಮತ್ತು ಟೀಪೂ ಸುಲ್ತಾನರ ಪ್ರಾಬಲ್ಯ ಗಳಿಂದ ಮೈಸೂರು ರಾಜ್ಯ ಒಡೆಯರ ಕೈತಪ್ಪಿದಂತೆಯೇ ಆಗಿತ್ತು. ತಮ್ಮ ಪತಿಯು ಕಾಲವಾದಮೇಲೆ, ಅವರು ದೇಶಹಿತದೃಷ್ಟಿಯಿಂದ ಅಖಂಡವಾಗಿ ಪ್ರಯತ್ನಮಾಡಿ ವಿಫಲರಾದರು. ಇಂಗ್ಲೀಷರು ಶ್ರೀರಂಗಪಟ್ಟಣದ ಮೇಲೆ ಮೂರು ಸಲ ದಂಡೆತ್ತಿ ಬಂದು ಲಡಾಯಿ ಮಾಡಿದರಾದರೂ, ಒಂದಲ್ಲ ದೊಂದು ರೀತಿಯಲ್ಲಿ ಕೌಲುಮಾಡಿಕೊಂಡು ಹಿಂದಿರುಗಿದ್ದರು. ಮೈಸೂರು ರಾಜ್ಯವನ್ನು ಯದುವಂಶದ ಪ್ರಭುಗಳಿಗೆ ಕೊಡಬೇಕೆಂಬ ಮಾತಾಗಲಿ ಅಥವಾ ಲಕ್ಷ್ಮಮ್ಮಣ್ಣಿಯವರ ಪ್ರಯತ್ನಗಳಿಂದ ಆಗಿದ್ದ ಪರಿಣಾಮವೇನೆಂಬು ದರ ವಿಚಾರವಾಗಿಯಾಗಲಿ ಅವರು ಯಾವ ಪ್ರಸ್ತಾಪವನ್ನೂ ಮಾಡಲಿಲ್ಲ. ಇದರಿಂದ ಲಕ್ಷ್ಮಮ್ಮಣ್ಣಿಯವರು ನಿರುತ್ಸಾಹಿಗಳಾಗಲಿಲ್ಲ. ತಮಗೆ ಪ್ರಾಣಾ ಪಾಯ ಒದಗಿದರೂ ಸರಿಯೇ ದೇಶದಲ್ಲಿ ತುಂಬಿದ್ದ ದೌರ್ಜನ್ಯವನ್ನು ಸುಟ್ಟು ಸ್ವಾತಂತ್ರ್ಯ ಮಣಿದೀಪವನ್ನು ಅರಮನೆಯಲ್ಲಿ ಹೊತ್ತಿಸಬೇಕೆಂದು ನಿರ್ಧರಿಸಿ ದರು.

ತಿರುಮಲರಾಯನು ತಂಜಾವೂರಿನಲ್ಲಿಯೇ ಇದ್ದನು. ಅವನ ರಾಯ ಭಾರ ಇಂಗ್ಲಿಷರೊಂದಿಗೆ ಬಿಡುವಿಲ್ಲದೆ ನಡೆಯುತ್ತಿತ್ತು. ಲಕ್ಷ್ಮಮ್ಮಣ್ಣಿ ಯವರ ರಾಜನೀತಿ ಕೌಶಲದ ಫಲವಾಗಿ ಕಂಪೆನಿ ಸರ್ಕಾರದವರಿಗೂ ಮಹಾರಾಣಿಯವರಿಗೂ ಒಂದು ಒಪ್ಪಂದವಾಯಿತು. ಆ ಒಪ್ಪಂದದಲ್ಲಿ ಹದಿನೈದು ನಿಯಮಗಳಿವೆ. ಇದನ್ನು ತಂಜಾವೂರು ಒಪ್ಪಂದವೆಂದು ಕರೆಯುತ್ತಾರೆ. ಈ ಒಪ್ಪಂದಕ್ಕೆ ಮದ್ರಾಸ್ ಗವರ್ನರ್ ಅವರು ಪರವಾಗಿ ಜಾರ್ಜ ಸಲಿವರ್ನರವರೂ ಮಹಾರಾಣಿಯವರ ಪರವಾಗಿ ರಾಯಭಾರಿ ತಿರುಮಲ

ರಾಯನೂ ರುಜು ಮಾಡಿದ್ದಾರೆ. ರೆವೆರೆಂಡ್ ಸಿ. ಟಿ. ಷಾವರ್ಟ್ಜ್ ಪಾದ್ರಿಯವರು ಸಾಕ್ಷ್ಯ ಹಾಕಿದ್ದಾರೆ. ಮೈಸೂರು ನಾಡಿನಲ್ಲಿ ತುಂಬಿದ ದಬ್ಬಾಳಿಕೆಯನ್ನು ದಹಿಸಲು ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ಕಾಲಾಗ್ನಿಯನ್ನು



ಟಿಪ್ಪೂ ಸುಲ್ತಾನ್

ಹೊತ್ತಿಸಿದಂತಾಯಿತು. "ಹೈದರ್ ಆಲಿಯು ಮೈಸೂರು ಅರಸರಲ್ಲಿ ನೌಕರನಾಗಿದ್ದುಕೊಂಡು ಕ್ರಮೇಣ ಅವರ ರಾಜ್ಯವನ್ನು ಅಪಹರಿಸುತ್ತಾನೆಂಬುದು ನಮಗೆ ಸ್ಪಷ್ಟವಾಗಿ ಮನವರಿಕೆಯಾಗಿದೆ" ಎಂದು ಕಂಪೆನಿ ಸರ್ಕಾರದವರು ಆ ಒಪ್ಪಂದದ ಮೊದಲನೆಯ ನಿಯಮದಲ್ಲಿಯೇ ಅನುಮೋದಿಸಿರುತ್ತಾರೆ. ಕಂಪೆನಿ ಸರ್ಕಾರದಯರು ಮಹಾರಾಣಿಯವರಿಗೆ ಸಹಾಯ ಮಾಡುವುದಾಗಿ ಒಪ್ಪಿದರು. ಈ ಮಹಾ ಪ್ರಯತ್ನದಲ್ಲಿ ಮಹಾರಾಣಿಯವರ ಆಪ್ತ ಬಂಧುವಿನಂತೆ, ಮೇಧಾವಿಗಳಾದ ಇಂಗ್ಲಿಷ್ ಸರದಾರರೊಂದಿಗೆ ಕಾಲಾನುಗುಣವಾಗಿ ವರ್ತಿಸಿ, ಜಯಪ್ರದವಾಗಿ ಕೆಲಸ ಮಾಡಿದ ತಿರುಮಲರಾಯನು ಕಂಪೆನಿ ಪ್ರಶಂಸೆಗೆ ಪಾತ್ರನಾಗಿದ್ದಾನೆ. ಆದರೇನು! ಮಹಾರಾಣಿಯವರ ಪ್ರಯತ್ನಗಳೆಲ್ಲ ಕುಸಿದುಬಿದ್ದುವು! ಟೀಪ್ಪೂ ಸುಲ್ತಾನನಿಗೆ ಲಕ್ಷ್ಮಮ್ಮಣ್ಣಿಯವರ ಸಂಧಾನಗಳ ಸುಳುವು ಗೂಢಚಾರರಿಂದ ಗೊತ್ತಾಯಿತು. ಅವನು ಈ ಸಂಧಾನ ಪ್ರಯತ್ನ

ಗಳಲ್ಲಿ ಮಹಾರಾಣಿಯವರಿಗೆ ಸಹಾಯ ಮಾಡಿರಬಹುದೆಂಬ ಅನುಮಾನದ ಮೇಲೆ ಅನೇಕರನ್ನು ಆನೆಯ ಕಾಲಿಗೆ ಕಟ್ಟಿಸಿ ರಾಜಧಾನಿಯ ಬೀದಿಗಳಲ್ಲಿ ಎಳೆಸಿದನು. ಅಂಚೆ ಶ್ಯಾಮಯ್ಯನನ್ನೂ ಅವನ ತಮ್ಮ ರಂಗಯ್ಯನನ್ನೂ ಕಬ್ಬಿಣದ ಪಂಜರಗಳಲ್ಲಿ ಸೆರೆಹಿಡಿಸಿ ಮಂಗಳೂರಿಗೆ ಕಳುಹಿಸಿದನು. ಲಕ್ಷ್ಮಮ್ಮಣ್ಣಿಯವರಿಗೆ ನಿರ್ಬಂಧ ಇನ್ನೂ ಹೆಚ್ಚಾಯಿತು. ಅದೇ ಕಾಲದಲ್ಲಿ ಟೀಪೂ ಸುಲ್ತಾನನು ಮೈಸೂರು ಕೋಟೆಯನ್ನು ಹಾಳುಗೆಡವಿಸಿ ಕಾಡುಬಸವನ ತಿಟ್ಟನಲ್ಲಿ ಹೊಸದಾಗಿ ಕೋಟೆಯನ್ನೂ ಪಟ್ಟಣವನ್ನೂ ಕಟ್ಟಿಸಿ ನಜರಬಾದ್ ಎಂದು ಹೆಸರಿಟ್ಟನು. ಮೈಸೂರಿನಲ್ಲಿದ್ದ ಜನರು ಶ್ರೀರಂಗಪಟ್ಟಣದ ಬಳಿ ಇರುವ ಗಂಜಾಂ ಪೇಟೆಗಾಗಲಿ ಅಥವಾ ಹೊಸದಾಗಿ ಕಟುತ್ತಿದ್ದ ಸುಲ್ತಾನ್ ಪೇಟೆಗಾಗಲಿ ಹೋಗಿ ನೆಲೆಸಬೇಕೆಂದು ಹುಕುಂ ಮಾಡಿದನು. ಅದೇ ಸಮಯದಲ್ಲಿ ಕೊಡಗು ಮತ್ತು ಮಲಬಾರು ಪ್ರಾಂತಗಳಲ್ಲಿ ಜನರು ದಂಗೆ ಯೆದ್ದರು. ಅನೇಕ ಪಾಳೆಯಗಾರರು ಟೀಪುವಿನ ದೌರ್ಜನ್ಯವನ್ನು ಪ್ರತಿಭಟಿಸಿ, ಮಹಾರಾಣಿಯವರಿಗೆ ಸಹಾಯಮಾಡಲು ಸಿದ್ಧರಾಗಿದ್ದರು. ಅದೇ ತಕ್ಕ ಸಮಯವೆಂದು ಇಂಗ್ಲೀಷರು ಶ್ರೀರಂಗಪಟ್ಟಣದ ಮೇಲೆ ದಂಡೆತ್ತಿ ಬಂದರು. ಲಕ್ಷ್ಮಮ್ಮಣ್ಣಿಯವರು ತಮ್ಮ ಅಭೀಷ್ಟ ನೆರವೇರುವುದೆಂದು ಸಂತೋಷದಿಂದ ದ್ದರು. ಆದರೆ, ಆಗ ಟೀಪುವು ಇಂಗ್ಲೀಷರೊಂದಿಗೆ ಸಂಧಿಮಾಡಿಕೊಂಡು ಅವರನ್ನು ಹಿಂದಕ್ಕೆ ಕಳುಹಿಸಿದನು. ಲಕ್ಷ್ಮಮ್ಮಣ್ಣಿಯವರು ನಿರಾಶರಾದರು!

ಧೀಮಂತೆಯರಾದ ಲಕ್ಷ್ಮಮ್ಮಣ್ಣಿಯವರು ತಮ್ಮ ಸಂಕಲ್ಪವನ್ನು ಬಿಡಲಿಲ್ಲ. ತಮ್ಮ ಪ್ರಾಣವನ್ನಾದರೂ ಈ ಸ್ವಾತಂತ್ರ್ಯ ಸಾಧನೆಯಲ್ಲಿ ಅರ್ಪಿಸಲು ಅವರು ಹಿಂದೆಗೆಯುತ್ತಿರಲಿಲ್ಲ. ರಾಜಧಾನಿಯ ಪ್ರಮುಖರೂ ಅಧಿಕಾರಿಗಳೂ ಲಕ್ಷ್ಮಮ್ಮಣ್ಣಿಯವರಲ್ಲಿ ಸಹಾನುಭೂತಿಯಿಂದ ವರ್ತಿಸು ತ್ತಿದ್ದರು. ಅವರು ಕಟ್ಟಕಡೆಯ ಪ್ರಯತ್ನವನ್ನು ಮಾಡಿಯೇ ತೀರಬೇಕೆಂದು ನಿಶ್ಚಯಿಸಿದರು. ಆಗ ಟೀಪೂಸುಲ್ತಾನನ ಪರಮಾಪ್ತನಾಗಿದ್ದ ಕೃಷ್ಣರಾವ್ ಎಂಬ ಅಧಿಕಾರಿಯು ಲಕ್ಷ್ಮಮ್ಮಣ್ಣಿಯವರ ಸಂಧಾನಪ್ರಯತ್ನಗಳಲ್ಲಿ ಸಹಕರಿಸು ತ್ತಿದ್ದನೆಂದು ಸುಲ್ತಾನನಿಗೆ ಗೊತ್ತಾಯಿತು. ಕೃಷ್ಣರಾಯನು ಲಕ್ಷ್ಮಮ್ಮಣ್ಣಿ ಯವರ ಅನುಮತಿಯಂತೆ ಸಂಧಾನ ಪತ್ರವೊಂದನ್ನು ಮದ್ರಾಸ್ ಸರ್ಕಾರಕ್ಕೆ

ತಲುಪಿಸಲು ಏರ್ಪಾಟು ಮಾಡಿದ್ದನು. ಆ ಪತ್ರ ಕನ್ನಡದಲ್ಲಿ ಬರೆದಿತ್ತು. ಅದನ್ನು ಅವನು ತನ್ನ ಟೊಳ್ಳು ಕೈಗೋಲಿನಲ್ಲಿ ಹುದುಗಿಸಿಟ್ಟುಕೊಂಡಿದ್ದನು. ಅದು ಹೇಗೋ ಸುಲ್ತಾನನಿಗೆ ಸಮಾಚಾರ ಬಂತು. ಅವನು ಆ ಕಾಗದವನ್ನು ತನ್ನ ಭಾವಮೈದುನನಾದ ಸೈಯದ್ ಸಾಹೇಬನಿಂದ ಓದಿಸಿ ತಿಳಿದುಕೊಂಡನು. ಆ ಕಾಗದವನ್ನು ಕೃಷ್ಣರಾಯನ ತಮ್ಮ ಶೇಷಗಿರಿರಾಯನು ಬರೆದನೆಂದು ಸುಲ್ತಾನನಿಗೆ ತಿಳಿಯಿತು. ಅವನು ಆ ಇಬ್ಬರನ್ನೂ ಕೈಸೆರೆ ಹಿಡಿಸಿ ಶ್ರೀರಂಗ ಪಟ್ಟಣದಿಂದ ಹೊರಗಡೆ ಇರುವ ಯಾವುದೋ ಸ್ಥಳಕ್ಕೆ ಕಳುಹಿಸಿಬಿಟ್ಟನು. ಏನೇ ಆಗಲಿ, ಜನರು ಮೈಸೂರು ಪ್ರಭುಗಳಲ್ಲಿ ರಾಜಭಕ್ತಿಯಿಂದ ತುಂಬಿದ್ದರು. ಕ್ರಾಂತಿಯ ಕಾಲಾಗ್ನಿ ಭುಗಿಲೆಂದು ಹೊತ್ತಿ ಉರಿಯಲೇ ಬೇಕಾಯಿತು!

ಟೀಪೂಸುಲ್ತಾನನನ್ನು ಸುತರಾಂ ನಿರ್ಮೂಲ ಮಾಡಿದಲ್ಲದೆ ದಕ್ಷಿಣ ಹಿಂದೂಸ್ಥಾನದಲ್ಲಿ ತಾವು ನೆಲೆಯೂರಿ ನಿಲ್ಲುವಂತಿಲ್ಲವೆಂದು ಇಂಗ್ಲೀಷರಿಗೆ ಖಚಿತವಾಯಿತು. ಅವರು ಲಕ್ಷ್ಮಮ್ಮಣ್ಣಿಯವರೊಂದಿಗೆ ಈ ಮೊದಲೇ ಒಪ್ಪಂದ ಮಾಡಿಕೊಂಡಿದ್ದಂತೆ ಟೀಪುವನ್ನು ಯುದ್ಧದಲ್ಲಿ ಸೋಲಿಸಿ ಯದು ವಂಶದವರಿಗೆ ಮೈಸೂರು ರಾಜ್ಯವನ್ನು ವಹಿಸಿಕೊಡಬೇಕೆಂದು ನಿರ್ಧರಿಸಿದರು. ಇದನ್ನು ನಾಲ್ಕನೆಯ ಮೈಸೂರು ಯುದ್ಧವೆಂದು ಚರಿತ್ರೆಕಾರರು ಕರೆದಿರುತ್ತಾರೆ. ಈ ಯುದ್ಧದಲ್ಲಿ ಇಂಗ್ಲೀಷರಿಗೆ ಜಯವಾಯಿತು. ಟೀಪೂಸುಲ್ತಾನನು ಸತ್ತು ಹೋದನು. ಮೈಸೂರು ರಾಜಮನೆತನವನ್ನು ಇಂಗ್ಲೀಷರು ರಾಜ್ಯಕ್ಕೆ ಹಕ್ಕು ದಾರರೆಂದು ಭಾವಿಸಿ, ಲಕ್ಷ್ಮಮ್ಮಣ್ಣಿಯವರೊಂದಿಗೆ ಒಪ್ಪಂದ ಮಾಡಿಕೊಂಡಿ ದ್ದಂತೆ, ಆಗ ಇನ್ನೂ ಐದು ವರ್ಷದ ಬಾಲಕರಾಗಿದ್ದ ಮುಮ್ಮಡಿ ಶ್ರೀ ಕೃಷ್ಣ ರಾಜ ಒಡೆಯರಿಗೆ ರಾಜ್ಯವನ್ನು ವಹಿಸಿಕೊಟ್ಟರು. ಲಕ್ಷ್ಮಮ್ಮಣ್ಣಿಯವರ ಜೀವನ ತಪಸ್ಸು ಸಿದ್ಧಿಸಿತು! ಅವರು ಮರಣಕ್ಕೆ ಹೆದರದೆ, ಜ್ವಾಲಾಮಾಲಿನಿ ಯಂತೆ ಕ್ರಾಂತಿಯನ್ನು ಎಬ್ಬಿಸಿ. ತನ್ನ ಕರ್ಮ ಯಾಗಕ್ಕೆ ತಾಮಸ ವೃತ್ತಿಯ ಪಶುಸಮುದಾಯವನ್ನು ಬಲಿಗೊಟ್ಟು ಸ್ವಾತಂತ್ರ್ಯವನ್ನು ಗಳಿಸಿದರು.

ಶ್ರೀರಂಗಪಟ್ಟಣದ ಪತನವಾದಮೇಲೆ. ಇಂಗ್ಲೀಷ್ ಯೋಧರು ಟೀಪುವಿನ ಅರಮನೆಯನ್ನೂ ಭಂಡಾರವನ್ನೂ ಲೂಟಿ ಮಾಡಿದರು. ಅಮೌಲ್ಯ ವಾದ ಅಗಣಿತ ರತ್ನಾಭರಣಗಳೂ ವಜ್ರವೈಡೂರ್ಯಾದಿ ನವರತ್ನಗಳೂ ದೊರಕಿದುವು. ಒಬ್ಬ ಯೋಧನಿಗೆ ರತ್ನಖಚಿತವಾದ ಎರಡು ಕಂಠೀಹಾರಗಳು

ದೊರಕಿದುವು. ಅವುಗಳನ್ನು ಅವನು ಸೈನ್ಯವೈದ್ಯನಿಗೆ ಕೊಟ್ಟು ಒಂದು ಸೀಸೆ ಸಾರಾಯಿ ಕುಡಿದನಂತೆ! ಅವುಗಳಲ್ಲಿ ಒಂದರ ಬೆಲೆ ೩೦,೦೦೦ ಪೌಂಡು ಗಳೆಂದು ಆಗ ಹೈದರಾಬಾದಿನ ರತ್ನಪಡಿ ವ್ಯಾಪಾರಿಯೊಬ್ಬನು ನಿರ್ಧರಿಸಿದ ನಂತೆ! ಇನ್ನೊಂದರ ಬೆಲೆಯನ್ನು ಕಟ್ಟಲು ಅವನಿಗೆ ಸಾಧ್ಯವೆ ಆಗಲಿಲ್ಲವಂತೆ! ಆ ಲೂಟಿಯಲ್ಲಿ ಸಿಕ್ಕಿದ ಅಪಾರವಾದ ಐಶ್ವರ್ಯವನ್ನೆಲ್ಲ ಯುಕ್ತರೀತಿಯಲ್ಲಿ ಹಂಚಿಕೆ ಮಾಡಲು ಜನರಲ್ ಹ್ಯಾರಿಸ್‌ರವರು ಒಂದು ಸಮಿತಿಯನ್ನು ನೇಮಕ ಮಾಡಿದರು. ಗವರ್ನರ್ ಜನರಲ್‌ರವರೂ ಅದನ್ನು ಅನುಮೋದಿಸಿದರು. ಟೀಪೂಸುಲ್ತಾನನ ಪಟ್ಟದ ಕತ್ತಿಯನ್ನು ಸಮಿತಿಯವರು ಇಂಗ್ಲೀಷ್ ಸೈನ್ಯದ ಮಹಾದಂಡನಾಯಕ ಜನರಲ್ ಬೆಯಿರ್ಡ್ ಎಂಬುವನಿಗೆ ಬಹುಮಾನವಾಗಿ ಕೊಟ್ಟರು. ಅರಮನೆಯ ತೋಷೀಖಾನೆಯಲ್ಲಿದ್ದ ಅನೇಕ ದೇವತಾ ವಿಗ್ರಹ ಗಳನ್ನು ಬೇರೆ ಬೇರೆ ದೇವಾಲಯಗಳಿಗೆ ಹಂಚಿಕೊಟ್ಟರು. ಟೀಪುವಿನ ಮಯೂರಾಸನದಲ್ಲಿದ್ದ ಚಿನ್ನದ ಹ್ಯೂಮಾಪಕ್ಷಿಯಲ್ಲಿ ಅನರ್ಘ್ಯವಾದ ಪಚ್ಚೆ ಯಿತ್ತು. ಆ ಪಕ್ಷಿಯ ಕೊಕ್ಕಿನಲ್ಲಿ ನವರತ್ನಗಳನ್ನು ಕೆತ್ತಿದ್ದರು. ಲಾರ್ಡ್ ಮಾರ್ನಿಂಗ್‌ಟನ್‌ರವರು ಅದನ್ನು ಇಂಗ್ಲೇಂಡಿನ ರಾಣಿಯವರಿಗೆ ರಾಜಕಾಣಿಕೆ ಯಾಗಿ ಸಮರ್ಪಿಸಿದರು. ಉತ್ತಮೋತ್ತಮ ಗ್ರಂಥಗಳ ಭಂಡಾರವನ್ನು ಸಮಿತಿಯವರು ವಿಚಕ್ಷಣೆಯಿಂದ ವಿಂಗಡಿಸಿದರು. ಅದರಲ್ಲಿ ಪವಿತ್ರ ಕೊರಾನ್ ಗ್ರಂಥವನ್ನು ಇಂಗ್ಲೇಂಡಿನಲ್ಲಿರುವ ವಿಂಡ್ಸರ್ ಕ್ಯಾಸಲ್ ಪುಸ್ತಕ ಭಂಡಾರಕ್ಕೆ ಕಳುಹಿಸಿದನು. ಅದು ಕೈಬರೆಹದ ಪ್ರತಿ. ಸುಂದರವಾದ ಅಕ್ಷರಗಳನ್ನು ನೋಡಿದರೆ ಅದನ್ನು ಬರೆದವನು ಯಾವನೋ ಒಬ್ಬ ಪುಣ್ಯಪುರುಷನೆಂದು ಭಾಸವಾಗುತ್ತದೆ. ಇದು ಹಿಂದೆ ಅವರಂಗಜೇಬ್ ಚಕ್ರವರ್ತಿಯ ಬಳಿಯಲ್ಲಿದ್ದಿ ತಂತೆ! ಇದರ ಬೆಲೆ ೯,೦೦೦ ರೂಪಾಯಿಗಳಾಗುತ್ತದೆ. ಉಳಿದ ಪುಸ್ತಕ ಗಳನ್ನು ಆಗತಾನೇ ಕಲ್ಕತ್ತಾದಲ್ಲಿ ಹೊಸದಾಗಿ ಏರ್ಪಟ್ಟಿದ್ದ ಫೋರ್ಟ್‌ವಿಲಿಯಂ ಕಾಲೇಜಿಗೆ ಕಳುಹಿಸಿದರು. ಆ ಪುಸ್ತಕ ಭಂಡಾರದಲ್ಲಿ ಒಟ್ಟು ೧,೦೭೦ ಗ್ರಂಥ ಗಳಿದ್ದುವು. ಒಂದು ವಜ್ರ ನಕ್ಷತ್ರ, ಕೆಲವು ರತ್ನಾಭರಣಗಳು ಮತ್ತು ಟೀಪುವಿನ ಇನ್ನೊಂದು ಖಡ್ಗ–ಇವು ಲಾರ್ಡ್ ಮಾರ್ನಿಂಗ್ಟನ್‌ರವರಿಗೆ ದೊರೆತವು. ಟೀಪು ಯುದ್ಧಕಾಲದಲ್ಲಿ ಉಪಯೋಗಿಸುತ್ತಿದ್ದ ಶಿರಸ್ತ್ರಾಣವನ್ನೂ ಮತ್ತೊಂದು ಕರವಾಲವನ್ನೂ ಮಾರ್ಕ್ವಿಸ್ ಕಾರ್ನವಾಲೀಸರವರಿಗೆ ಬಹುಮಾನವಾಗಿ

ಕಳುಹಿಸಿದರು. ಟೀಪುವಿನ ಸಂಸಾರವನ್ನು ವೆಲ್ಲೂರಿಗೂ ಅಲ್ಲಿಂದ ಮುಂದೆ ಕಲ್ಕತ್ತಾ ನಗರಕ್ಕೂ ಕಳುಹಿಸಿದರು.

ಮುಂದೆ ಮೈಸೂರು ಪ್ರಭು ಶ್ರೀ ಕೃಷ್ಣರಾಜ ಒಡೆಯರವರು ರತ್ನ ಸಿಂಹಾಸನಾರೂಢರಾದರು. ಮಹಾಮಾತೃಶ್ರೀ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ದಿವಾನ್ ಪೂರ್ಣಯ್ಯನವರ ಸಹಾಯದಿಂದ ರಾಜಕಾರ್ಯಗಳನ್ನು ನಿರ್ವಹಿಸುತ್ತ ಧರ್ಮದಿಂದ ರಾಜ್ಯಪರಿಪಾಲನೆ ಮಾಡಿದರು. ಲಕ್ಷ್ಮಮ್ಮಣ್ಣಿಯವರು ಹತ್ತು ವರ್ಷ ಕಾಲ ಪ್ರಜಾ ರಕ್ಷಣೆಯನ್ನು ಮಾಡಿದರು. ಅವರು ತಮ್ಮ ೬೮ನೆಯ ವಯಸ್ಸಿನಲ್ಲಿ ಪರಂಧಾಮುವನ್ನು ಸೇರಿದರು. ಅವರ ಪುಣ್ಯನಾಮ ಅಮರವಾಯಿತು!

## ಶುಭಾಶಂಸನೆ

### ರಾಜ್ಯಪಾಲರು

ಶ್ರೀ ಜಯಚಾಮರಾಜ ಒಡೆಯರ್ ಬಹಾದ್ದೂರ್ ಮಹಾಸ್ವಾಮಿಯವರು ಈಗ ರತ್ನಸಿಂಹಾಸನಾರೂಢರಾದರು. ಇವರ ಪಟ್ಟಾಭಿಷೇಕ ಮಹೋತ್ಸವವು ಕ್ರಿ. ಶ. ೧೯೪೦ನೆಯ ಇಸವಿ ಸೆಪ್ಟೆಂಬರ್ ೮ನೆಯ ತಾರೀಖಿನ ದಿನ ಶುಭಮುಹೂರ್ತದಲ್ಲಿ ನೆರವೇರಿತು.



ಶ್ರೀ ಮನ್ಮಹಾರಾಜರು "ಸತ್ಯಮೇವೋದ್ಧರಾಮ್ಯಹಂ" ಎಂಬ ಪವಿತ್ರ ಧ್ಯೇಯದಿಂದ ರಾಜ್ಯಪರಿಪಾಲನೆ ಮಾಡಿದರು. ಈ ಪ್ರಭುಗಳು ತಮ್ಮ ಸಕಲ

ಸದ್ಗುಣಗಳಿಂದಲೂ ಪ್ರಜೆಗಳಿಗೆ ಮಾರ್ಗದರ್ಶಕರಾಗಿರುತ್ತಾರೆ. ತರುಣ ವಯಸ್ಸಿನಲ್ಲಿಯೇ ಅವರು ಗುರುತರವಾದ ರಾಜಕಾರ್ಯಗಳನ್ನು ದಕ್ಷತೆಯಿಂದಲೂ ವಿಚಕ್ಷಣೆಯಿಂದಲೂ ನಿರ್ವಹಿಸುತ್ತಿದ್ದರು. ಮಹಾಸ್ವಾಮಿಗಳವರ ಪ್ರಜೆಗಳಾಗಿ ನಾವು ಅಭಿವೃದ್ಧಿ ಮಾರ್ಗವನ್ನು ಹಿಡಿದೆವು.

ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ ಮಹಾನುಭಾವತೆ, ಚಾಮರಾಜ ಒಡೆಯರ ಔದಾರ್ಯ, ನಾಲ್ವಡಿ ಶ್ರೀ ಕೃಷ್ಣರಾಜ ಒಡೆಯರ ಪ್ರಜಾವಾತ್ಸಲ್ಯ ಇವು ನಮ್ಮ ಶ್ರೀ ಜಯಚಾಮರಾಜ ಒಡೆಯರಲ್ಲಿ ತುಂಬಿವೆ. ತಮ್ಮ ಪೂಜ್ಯ ತೀರ್ಥರೂಪರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ ಸರ್ವಸಮತಾ ಭಾವ ಇವರಲ್ಲಿ ಪ್ರತಿಬಿಂಬಿಸುತ್ತಿದೆ. ನಾಡು ಸರ್ವತೋಮುಖವಾಗಿ ಅಭಿವೃದ್ಧಿಯಾಗುತ್ತಿದೆ. 1947ನೆಯ ಇಸವಿಯಲ್ಲಿ ರಾಜ್ಯ ಸ್ವತಂತ್ರವಾಯಿತು. ಅಂದಿನಿಂದ ಮಹಾರಾಜರು ರಾಜಪ್ರಮುಖರಾಗಿ, ಕೆಲವುಕಾಲ ಆಡಳಿತವನ್ನು ನಡೆಸಿದರು. ಅನಂತರ ರಾಜ್ಯಪಾಲರಾದರು. 1964ನೆಯ ಮೇ ತಿಂಗಳು 4ನೆಯ ದಿನ ಅವರು ಮದ್ರಾಸ್ ರಾಜ್ಯದ ರಾಜ್ಯಪಾಲರಾಗಿ ಅಧಿಕಾರ ವಹಿಸಿಕೊಂಡರು.

ಶ್ರೀ ಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹಾದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಅವರಿಗೆ ಶ್ರೀ ಚಾಮುಂಡೇಶ್ವರಿ ದೇವಿ ಅನಂತಾನಂತ ಶುಭಪರಂಪರೆಗಳನ್ನು ಅನುಗ್ರಹಿಸಿ ಕಾಪಾಡಲಿ.

ಚಿರಮಭಿವರ್ಧತಾಂ ಯದುಸಂತಾನ ಶ್ರೀಃ.

